ಭಾರತೀಯ ಕಥಾವಳಿ ೩

# ತಮಿಳು ಕತೆಗಳು






ಪ್ರಕಾಶಕರು

ಸಾಧನ ಮುದ್ರಣಾಲಯ

ಧಾರವಾಡ

ಬೆಲೆ: ೧೨ ಆಣೆ



# ಮುನ್ನುಡಿ

ನಮ್ಮ ನೆರೆನಾಡಾದ ತಮಿಳುನಾಡಿನ ಕೆಲವು ಪ್ರಮುಖ ಕತೆಗಾರರ ಕತೆಗಳ ಭಾಷಾಂತರವನ್ನು ಈ ಭಾಗದಲ್ಲಿ ಕೊಡಲಾಗಿದೆ. ಚಕ್ರವರ್ತಿ ರಾಜಗೋಪಾಲಾಚಾರ್ಯರ ಕತೆಗಳ ಕರುಣೆಯು ಕೆಚ್ಚನ್ನೂ ಎಸ್. ವಿ. ವೀರರಾಘವಾಚಾರ್ಯರ ನಗೆಯ ನಲಿವನ್ನೂ ಇಂಗ್ಲೀಷಿನಲ್ಲಿ ಜನ ಓದಿದ್ದಾರೆ. ಅವರ ತಮಿಳು ಬರೆಹಗಳೂ ಉಳಿದ ಕತೆಗಾರರ ಕತೆಗಳೂ ಕನ್ನಡಿಗರಿಗೆ ಪರಿಚಿತವಲ್ಲ. ಆ ಕೆಲಸವನ್ನು ಇಲ್ಲಿ ಮಾಡಲಾಗಿದೆ.

ಭಾಷಾಂತರ ಕಾರ್ಯದಲ್ಲಿ ಬೆಂಗಳೂರಿನ ಶ್ರೀಮತಿ ಶ್ರೀರಂಗಮ್ಮನವರೂ ಮದರಾಸು ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯ ಆ. ತಿ. ಶ್ಯಾಮಾಚಾರ್ಯ, ಬಿ. ಎಸ್ ಸಿ. ಯವರೂ ನಮಗೆ ನೆರವಾಗಿದಾರೆ. ಅವರಿಗೆ ನಮ್ಮ ಕೃತಜ್ಞತೆಗಳು. ಮೂಲ ಕತೆಗಾರರಿಗೂ ನಾವು ಋಣಿಗಳೇ.

ಧಾರವಾಡ
೧-೮-೪೧

ಪ್ರಕಾಶಕರು

## ಪರಿವಿಡಿ

# ರಾಮರಾಯನ ಗುಡಿ

ಶ್ರೀಮಾನ್ ಕುಮಾರಸ್ವಾಮಿಯವರ ಕೃತಿಗಳು ಜನಪ್ರಿಯವಾಗಿವೆ. ಇವರ ಭಾಷಾಶೈಲಿಯು ಓದುಗನನ್ನು ಒಲಿಸಿಕೊಳ್ಳುತ್ತದೆ; ಕಥಾ ಪ್ರಸಂಗವು ಅವನನ್ನು ತೇಲಿಸಿಕೊಂಡು ಒಯ್ಯುತ್ತದೆ. ಕಥೆಯು ಬೆಳೆದು ವಿಶಾಲವಾಗಿ ಹರಡಿಕೊಂಡು ಒಂದು ಅದ್ಭುತ ಕಲ್ಪನಾಸಮುದ್ರವಾಗುತ್ತದೆ. ಇಲ್ಲಿನ ಕಥೆಯಲ್ಲಿ ಇಂಥ ಒಂದು ಸ್ಥಾನಕ್ಕೆ–ತುಂಗಭದ್ರೆಯ ಭವ್ಯವಾದ ವಕ್ಷಸ್ಥಲಕ್ಕೆ–ಓದುಗನನ್ನು ಎಚ್ಚರಿಕೆಯಿಂದ ಕರೆದೊಯ್ದು ನದಿಯ ಮಧ್ಯೆ ಇರುವ 'ರಾಮರಾಯನ ಗುಡಿ'ಯ ಭಗ್ನಾವಶೇಷವನ್ನು ತೋರಿಸುತ್ತಾರೆ. ಆಗ ಓದುಗನ ಹೃತ್ತಂತಿ ಮಿಡಿಯುತ್ತದೆ; ಕುತೂಹಲವು ಹೆಚ್ಚುತ್ತದೆ. ಅಲ್ಲಿ ಗಂಟನ್ನು ಬಿಚ್ಚಿ ಅದರಲ್ಲಿ ಇರುವುದನ್ನು ಕುಸುರುಕುಸುರಾಗಿ ಬಿಡಿಸಿತೋರಿಸುವರು. ಇದೇ ಇವರ ಸಂವಿಧಾನ ಕೌಶಲದ ಗುಟ್ಟು. ಇತರ ಕಥೆಗಳಲ್ಲೂ ಈ ಬಗೆಯ ಒಂದು ಮಾರ್ಗ ಹಿಡಿದಿದ್ದಾರೆ.

ಸಾಮಾನ್ಯವಾಗಿ ಎಲ್ಲ ತಮಿಳು ಸಾಹಿತಿಗಳಂತೆ ಶ್ರೀ ಕುಮಾರಸ್ವಾಮಿಯವರು ಇಂಗ್ಲೀಷು ಸಾಹಿತ್ಯವನ್ನು ಅಭ್ಯಸಿಸಿದ್ದಾರೆ. ಇವರಲ್ಲಿನ ಒಂದು ವಿಶೇಷವೆಂದರೆ ಇವರ ಬಂಗಾಲಿ ಭಾಷೆಯ ಅಧ್ಯಯನ. ಬಂಗಾಲಿ ಭಾಷೆಯ ಅನೇಕ ಕೃತಿಗಳನ್ನು ಇವರು ತಮಿಳಿಗೆ ಅನುವಾದ ಮಾಡಿದ್ದಾರೆ. ಕವಿ ರವೀಂದ್ರರ ಸೆಳೆತಕ್ಕೆ ಸಿಕ್ಕಿದವರಲ್ಲಿ ಇವರು ಒಬ್ಬರು. ಅದರಿಂದ ಅರಳಿದ ಕಮಲವೇ ಇವರ ಕಲೆ ಎಂದರೂ ತಪ್ಪಾಗದು.

## ಮುನ್ನುಡಿ

ವಿಶಾಲವಾದ ತುಂಗಭದ್ರಾ ನದಿಯಲ್ಲಿ ನಮ್ಮ ಹಡಗು ಆಚೆಯ ದಂಡೆಗೆ ಹೋಗುತ್ತಿತ್ತು. ಸ್ವಲ್ಪ ಹೊತ್ತಿಗೆ ನದಿಯ ಮಧ್ಯದಲ್ಲಿ ಹಚ್ಚನೆಯ ಚಿಕ್ಕ ನಡುಗಡ್ಡೆಯೊಂದು ಕಾಣಿಸಿತು. ಅದರಲ್ಲಿ ಎಣಿಸಿದ ಹಾಗೆ ನಾಲ್ಕೋ ಐದೋ ತಾಳೇಮರಗಳು. ಆ ದ್ವೀಪದ ಪಕ್ಕದಲ್ಲಿಯೆ ನಮ್ಮ ಹಡಗು ಹಾದು ಹೊರಟಿತು. ಆಗಾಗ ಗಾಳಿಯ ಶಬ್ದವೂ ತಾಳೇಮರದ 'ಟರ್ ಟರ್' ಎಂಬ ಸಪ್ಪುಳೂ ನದಿಯ ಅಲೆಯ 'ಶಿರ್ ಶಿರ್' ಎಂಬ ದನಿಯೂ ನಡುನಡುವೆ ಹಡಗು ನಡೆಯಿಸುವವರ ಸಂಭಾಷಣೆಯೂ ಕೇಳಿಸುತ್ತಿತ್ತು.

'ತಮ್ಮ, ಎಚ್ಚರಿಕೆ! ಹಡಗು ಕಲ್ಲಿಗೆ ತಗಲೀತು.'

ವಾಸ್ತವವಾಗಿಯೂ ಹಡಗು ನಡೆಯಿಸಲು ಚೆನ್ನಾಗಿ ಬಲ್ಲವರಿಗೆ ಮಾತ್ರ ಆ ಅಪಾಯಕರವಾದ ಸ್ಥಳದಲ್ಲಿ ಹಡಗನ್ನು ಸವರಿಸಿಕೊಂಡು ನಡೆಸಲು ಸಾಧ್ಯ. ಸ್ವಲ್ಪ ಅಜಾಗರೂಕತೆಯಾದರೆ ಹಡಗು ಕಲ್ಲಿಗೆ ಹೊಡೆದು ಮುಳುಗಬೇಕಾದುದೆ. ನದಿಯೋ ಆ ಸ್ಥಳದಲ್ಲಿ ಬಹಳ ಆಳ. ನನ್ನೊಡನೆ ಬಂದಿದ್ದ ಸ್ನೇಹಿತರ ಕಡೆ ತಿರುಗಿ 'ಏನು ಇಲ್ಲಿ? ತುಂಬಾ ಕೆತ್ತನೆಯ ಕಲ್ಲುಗಳು!' ಎಂದು ಕೇಳಿದೆ.

'ಇಲ್ಲ, ಇದು ರಾಮರಾಯನು ಒಡೆದ ಗುಡಿ' ಅಂದರು ಅವರು.

ಅಷ್ಟರಲ್ಲಿ ನಮ್ಮ ಹಡಗು ಆ ದ್ವೀಪದ ಪಕ್ಕಕ್ಕೆ ಬಂದಿತು. ನನ್ನ ಕಣ್ಣುಗಳಿಗೆ ಎಂದೂ ಕಾಣದ ಅಪೂರ್ವ ದೃಶ್ಯವು ಅಂದು ಒದಗಿತು. ಸಾವಿರಾರು ಕೆಂದಾವರೆಗಳು ನದಿಯಲ್ಲಿ ರತ್ನಗಂಬಳಿ ಹಾಸಿದಹಾಗೆ ಅರಳಿದ್ದವು. ಅವುಗಳ ನಡುನಡುವೆ ಅಪೂರ್ವ ಶಿಲ್ಪಕಲಾಸೌಂದರ್ಯಯುತವಾದ ಕಲ್ಲು ಕಂಬಗಳೂ ಮೆಟ್ಟಲುಗಳೂ ಅಲ್ಲಲ್ಲಿ ತಲೆದೋರುತ್ತಿದ್ದವು. ಕಾಲುಹೋದ ಪ್ರತಿಮೆಗಳು, ಹಾವುಗಳನ್ನು ಹಿಡಿದು ನಿಂತಿರುವ ಮೂಗು ಒಡೆದ ನವಿಲಿನ ರೂಪಗಳು, ಕಲ್ಲಿನಲ್ಲಿ ಕೆತ್ತಿದ ಕಮಲ ಪುಷ್ಪದ ವಿಚಿತ್ರ ಕೃತಿಗಳೂ ಅಲ್ಲಿ ಕಂಡುಬಂದವು. ಎಷ್ಟು ಬಗೆಯವು! ಒಂದಕ್ಕಾದರೂ ಅವಯವಗಳು ಒಡೆಯದೆ ಇರಬಾರದೆ? ಕೈಗಳು ಹೋದ, ಕಿವಿಗಳು

ಹೋದ ಅನೇಕ ಅಪ್ಸರ ಸ್ತ್ರೀಯರ ಪ್ರತಿಮೆಗಳು ತಲೆಯನ್ನು ಎತ್ತಿ ನಮ್ಮನ್ನು ನೋಡುವಂತೆ ಇದ್ದವು. ಇನ್ನೂ ಅವುಗಳ ಮುಖದಲ್ಲಿ ಜೀವ ಕಳೆಯು ಪ್ರತಿಬಿಂಬಿಸುತ್ತಿತ್ತು. ಅವುಗಳನ್ನು ಕೆತ್ತಿದ ಶಿಲ್ಪಿಯಾರೊ! 'ಆಹಾ! ಇಂತಹ ದೇವಸ್ಥಾನವನ್ನು ಒಡೆದ ಮೂಢನು ಯಾರೊ?' ಎಂದು ನಾನಂದೆ. ನನ್ನ ಸ್ನೇಹಿತರು 'ಯಾಕೆ, ರಾಮರಾಯನೆ ಈ ಕೆಲಸವನ್ನು ಮಾಡಿದವನು!' ಎಂದು ಹೇಳಿ ಈ ಅದ್ಭುತ ಕಥೆಯನ್ನು ವರ್ಣಿಸಿದರು.

೧

ನಾಲ್ಕುನೂರು ವರ್ಷಗಳ ಹಿಂದೆ ನಡೆದ ಘಟನೆಯಿದು. ವಿಶಾಲ ವಾದ ವಿಜಯನಗರ ಸಾಮ್ರಾಜ್ಯ ಮಣ್ಣುಪಾಲಾದ ಸಮಯ. ರಾಜ ವಂಶದವರು ಚದುರಿಹೋಗಿ ತಮಿಳು ನಾಡಿನಲ್ಲಿ ಹಲವು ಚಿಕ್ಕ ಪಾಳಯ ಪಟ್ಟಿಗಳನ್ನು ಕಟ್ಟಿ ವಾಸಮಾಡುತ್ತಿದ್ದರು. ಆಗ ವಿಜಯನಗರದ ಸಮೀಪ ದಲ್ಲಿದ್ದ ರಾಮನಗರವನ್ನು ಶೂರ ರಾಮರಾಯನು ಆಳುತ್ತಿದ್ದನು. ಅವನ ಹತ್ತಿರ 'ಕೊಂಡಲ್' ಎಂಬ ಕುದರೆಯೊಂದಿದ್ದಿತು. ಆ ಕುದುರೆಯೋ, ಬೆನ್ನಮೇಲೆ ಮನುಷ್ಯನು ಕೂಡುವುದೇ ತಡ, ಹಾಗೆಯೇ ಹಾರಿ ಗಾಳಿಯ ಜೊತೆಯಲ್ಲಿ ಪಂದ್ಯಕಟ್ಟಿಕೊಂಡು ಓಡುತ್ತಿತ್ತು. ರಾಮರಾಯನ ಹೊರತು ಯಾರೂ ಆ ಕುದುರೆಯಮೇಲೆ ಸವಾರಿಮಾಡಲಾಗುತ್ತಿರಲಿಲ್ಲ. ರಾಮರಾಯನದು ಕಬ್ಬಿಣದಂತಹ ಶರೀರ. ರಾಮರಾಯನ ಹಣೆಯಲ್ಲಿ ಹಲವಾರು ವೀರರನ್ನು ಕೊಂದ ಗುರುತು ಒಡೆದು ಕಾಣುತ್ತಿತ್ತು. ಪಕ್ಕದ ಸಾಮಾನ್ಯ ಅರಸನಾದ ರಾಯದುರ್ಗದ ಭರತರಾಯನು ರಾಮರಾಯ ನಿಗೆ ಶತ್ರುವಾಗಿ ಬೆಳೆದನು. ಆದರೆ ರಾಮರಾಯನೆಲ್ಲಿ ಭರತರಾಯನೆಲ್ಲಿ! ರಾಮರಾಯನ ಶೌರ್ಯದಿಂದಲೇ ಅಲ್ಲವೇ ವಿಜಯನಗರದ ಹಳೆಯ ನೆನಪು ಅಳಿಯದೆ ಇದ್ದುದು.

ನಡುರಾತ್ರಿ. ರಾಮರಾಯನಿಗೆ ನಿದ್ರೆಯೇ ಬರಲಿಲ್ಲ. ತಂಗಾಳಿ ಯನ್ನು ಸೇವಿಸಲು ಅವನು ನದಿಯ ತೀರದಲ್ಲಿ ಅಡ್ಡಾಡುತ್ತಿದ್ದನು. ಆಗ

ನದಿಯ ತೀರದ ಮರಳಿನಲ್ಲಿ ದರದರನೆ ಸದ್ದು ಕೇಳಿಸಿತು. ಅವನು ಉಸಿರಾಡದೆ ಕಿವಿಗೊಟ್ಟು ನದಿಯ ಕಡೆ ಗಮನಿಸಿದನು. ಕಗ್ಗತ್ತಲೆಯಲ್ಲಿ ದೊಡ್ಡ ಹಡಗೊಂದು ನದಿಯಲ್ಲಿ ಸಾಗಿದ್ದಿತು. ರಾಮರಾಯನ ಕಣ್ಣು ಗಳು ಮಿಂಚಿನಂತೆ ಹೊಳೆದವು. ನೋಡುತ್ತಿರುವಾಗಲೆ ಹಡಗು ಹೋದ ದಿಕ್ಕು ದೆಸೆ ಕೂಡಾ ಗೊತ್ತಾಗಲಿಲ್ಲ. ರಾಮರಾಯನು ನಿಟ್ಟುಸಿರು ಬಿಟ್ಟು ಬೇಗಬೇಗನೆ ಕೋಟೆಗೆ ಹೊರಟನು. ಕೋಟೆಯ ಗೋಡೆಯ ಮೇಲೆ ಕುಳಿತುಕೊಂಡು ರಾಮರಾಯನ ಸಹೋದರನಾದ ವಿರೂ ಪಾಕ್ಷನು ಕೊಳಲನ್ನು ಮಧುರವಾಗಿ ಊದುತ್ತಿದ್ದನು. ಯಾರೊ ವೇಗ ವಾಗಿ ಬರುತ್ತಿದ್ದ ಸದ್ದನ್ನುಕೇಳಿ ಅವನು ಬೆಚ್ಚಿಬಿದ್ದ. ಅಣ್ಣನನ್ನು ನೋಡಿದೊಡನೆ ವಿರೂಪಾಕ್ಷನು ಎದ್ದುನಿಂತನು.

'ವಿರೂ! ಒಡನೆಯೇ ಹೊರಡು!'

'ಎಲ್ಲಿಗೆ ಅಣ್ಣಾ?'

'ನದೀ ಸಂಗಮಕ್ಕೆ.'

ನದೀ ಸಂಗಮವು ಅಲ್ಲಿಂದ ಹತ್ತು ಕೋಸು ದೂರವಿರಬಹುದು. ನಾಲ್ಕೈದು ನದಿಗಳು ಆ ಸ್ಥಳದಲ್ಲಿ ತುಂಗಭದ್ರೆಯನ್ನು ಸೇರುತ್ತವೆ. ಅಲ್ಲಿ ಬಹಳೇ ಹಡಗುಗಳು. ಅಲ್ಲಿನ ಅಂಬಿಗರೆಲ್ಲರೂ ರಾಮರಾಯನ ಕಡೆಯ ವರು. ಕಳ್ಳತನದಲ್ಲಿ ಹೊರಟ ಹಡಗನ್ನು ಅಲ್ಲಿ ಹಿಡಿಯಬಹುದು. ಹೇಳಿದ ಮಾತ್ರಕ್ಕೆ ಆಯುಧಪಾಣಿಗಳಾದ ಅನೇಕ ಕುದುರೆ ಸವಾರರು ಕೋಟೆಯ ಹೊರಗೆ ಸಿದ್ಧರಾದರು. ಕೊಂಡಲ್ ಕುದುರೆಯು ನೆಲ ತಟ್ಟಿದರೆ ನೆಗೆದು ಹಾರುತ್ತಿತ್ತು. ಕುದುರೆಯನ್ನು ತಟ್ಟಿಕೊಂಡು ರಾಮರಾಯನು ಹೊರಕ್ಕೆ ಬಂದನು. ಸವಾರರಿಗೆಲ್ಲ ತನ್ನನ್ನು ಹಿಂಬಾಲಿಸುವಂತೆ ಆಜ್ಞಾಪಿ ಸಿದನು. ರಾಮರಾಯನು ಮೇಲೆ ಕೂಡುತ್ತಲೇ ಕುದುರೆಯು ಜಿಗಿ ಯಿತು.

ನದಿಯ ತೀರದಲ್ಲಿಯೇ ನಡೆದು ರಾಮರಾಯನು ಸಂಗಮದ ಬಳಿ ಕಾದುಕೊಂಡಿದ್ದನು. ಅಲ್ಲಿ ನಸುಬೆಳಕಿನಲ್ಲಿ ಸಾವಿರಾರು ಹಡಗುಗಳು ಇದ್ದುದು ಅವನಿಗೆ ಕಂಡುಬಂತು. ಒಂದೊಂದು ಹಡಗಿನಲ್ಲಿಯೂ

ಆಳುಗಳು ತಯಾರಾಗಿ ನಿಂತರು. ಇದ್ದಕ್ಕಿದ್ದ ಹಾಗೆ ನದಿಯ ಮಧ್ಯೆ ಒಂದು ದೊಡ್ಡ ಹಡಗಿನ ಕಪ್ಪು ನೆರಳು. ಡುಂ-ಡುಂ-ಡುಂ-ಎಂದು ಗುಂಡಿನ ಶಬ್ದ. ನಿದ್ದೆ ಹೋಗುತ್ತಿದ್ದ ಹಡಗುಗಳೆಲ್ಲಾ ಪಳಪಳ ಆ ದೊಡ್ಡ ಹಡಗನ್ನು ಮುತ್ತಿದುವು. ಕಣ್ಣು ಮುಚ್ಚಿ ತೆಗೆಯುವ ಹೊತ್ತಿಗೆ ಎಲ್ಲಾ ನಡೆದು ಹೋಯಿತು. ವಿರೂಪಾಕ್ಷನು ಹಡಗಿನೊಳಕ್ಕೆ ಹಾರಿ ಒಳಗಿನ ಕೊಠಡಿಯನ್ನು ಶೋಧಿಸಿದನು. ಸ್ವಲ್ಪ ಹೊತ್ತಿನಲ್ಲಿ ಅವನು ಚೀಲವೊಂದನ್ನು ಕೈಯಲ್ಲಿ ಹಿಡಿದುಕೊಂಡು ಉತ್ಸಾಹದೊಡನೆ ಅಣ್ಣನ ಹತ್ತಿರ ಬಂದು ಅದನ್ನು ಒಪ್ಪಿಸಿದನು. 'ಬಾ! ಇನ್ನೂ ಏನು ಇದೆಯೋ ನೋಡೋಣ' ಎಂದು ದೊಡ್ಡರಾಯನು ಹೇಳಿ ಒಳಕ್ಕೆ ಹೋಗುವುದ ರಲ್ಲಿದ್ದನು. ವಿರೂಪಾಕ್ಷನು ಅವನನ್ನು ತಡೆದು ಕೀಳ್ದನಿಯಲ್ಲಿ 'ಒಳಗೆ ಭರತರಾಯನ ಕುಟುಂಬವೂ ಹೆಣ್ಣು ಮಕ್ಕಳೂ ಇನ್ನೂ ಹಲವು ಹೆಂಗಸರೂ ಇರುವರು. ನಾವು ಅಲ್ಲಿಗೆ ಹೋಗುವುದು ಉಚಿತವಲ್ಲ' ಎಂದನು. ರಾಮರಾಯನು 'ಆದರೆ ಒಳಗೆ ಯಾರಾದರೂ ಗಂಡಸರು ಇದ್ದರೆ ಒಡನೆಯೆ ಹೊರಗೆ ಬರಹೇಳು' ಎಂದು ಹೇಳಲು ವಿರೂಪಾಕ್ಷನು, 'ಅಣ್ಣಾ! ಅಲ್ಲಿ ಒಂದು ಕೂಡಾ ಗಂಡು ಕಾಗೆ ಇಲ್ಲ. ಭರತರಾಯನ ದೊಡ್ಡ ಮಗನು ನಾನು ಹೇಗುವಷ್ಟರಲ್ಲಿ ಓಡಿಬಿಟ್ಟಿದ್ದ.' ಎಂದು ಉತ್ತರವಿತ್ತನು.

ಚೀಲವನ್ನು ಬಿಚ್ಚಿ ನೋಡಿದಾಗ ರಾಮರಾಯನ ಕಣ್ಣುಗಳು ಕುಕ್ಕಿದುವು. ಚೀಲದಲ್ಲಿ ಅಮೂಲ್ಯವಾದ ರತ್ನಗಳು ಹೊಳೆಯುತ್ತಿದ್ದುವು. ರಾಮರಾಯನು ವಿರೂಪಾಕ್ಷನ ಬೆನ್ನು ತಟ್ಟಿ 'ಭಲೆ ವಿರೂ! ನೀನೆ ಇದನ್ನು ಮಂತ್ರಿಗೆ ಒಪ್ಪಿಸು. ನಮ್ಮ ಕೋಟೆಯನ್ನು ಭದ್ರಪಡಿಸಲು ಇದು ಬೇಕಾಗುವುದು. ಭರತರಾಯನ ಹೆಂಗಸರನ್ನೆಲ್ಲಾ ಸುರಕ್ಷಿತವಾದ ಸ್ಥಳದಲ್ಲಿ ಇರಿಸು, ಹೋಗು!' ಎಂದನು. ಮನಸ್ಸಿಗೆ ಬಹಳ ಆನಂದವಾಯಿತು. ರಾಮರಾಯನು ಒಡನೆಯೆ ರಾಯದುರ್ಗವನ್ನು ಮುತ್ತಿ ಕ್ಷಣಹೊತ್ತಿನೊಳಗೆ ಅದನ್ನು ಸೂರೆಗೊಂಡನು. ಆದರೆ ಭರತರಾಯನು ಕೋಟೆಯ ಹಿಂಭಾಗದಿಂದ ಕಂದಕಕ್ಕೆ ಹಾರಿ ಮಾಯವಾಗಿಬಿಟ್ಟನು. ಅರಮನೆಯು 'ಓ' ಎಂದು ಶೂನ್ಯವಾಗಿತ್ತು. ರಾಜ್ಯಾಲಂಕೃತನಾಗಿ ರಾಮರಾಯನು ತನ್ನ ರಾಜಧಾನಿಗೆ ಹಿಂತಿರುಗಿದನು.

೨

ಅರೆಬರೆಯಾಗಿ ಕಟ್ಟಿದ್ದ ರಾಮರಾಯನ ಮಾಳಿಗೆಯ ಎದುರಾಗಿ ಒಂದು ದೊಡ್ಡ ಮರವಿದ್ದಿತು. ಒಂದು ದಿನ ಮಧ್ಯಾಹ್ನ ಒಳ್ಳೇ ಬಿಸಿಲು ಸಮಯದಲ್ಲಿ ದೊಡ್ಡ ರಾಯನು ತನ್ನ ಕೊಟಡಿಯಲ್ಲಿ ಮಲಗಿದ್ದನು. ಕಿಟಕಿಯ ಮೂಲಕ ಅವನ ಕಣ್ಣುಗಳು ಮಹಡಿಗಳಿಂದ ತುಂಬಿದ ನಗರವನ್ನು ನೋಡುತ್ತಿದ್ದವು. ಇದ್ದಕ್ಕಿದ್ದ ಹಾಗೆ ಅವನ ದೃಷ್ಟಿಯು ಮರದ ಕಡೆಗೆ ಹೋಯಿತು. ದಟ್ಟವಾದ ಆ ಮರದ ನೆರಳಿನಲ್ಲಿ ರಂಭೆಯೋ, ಯಕ್ಷಕಿನ್ನರಿಯೋ ಎಂಬ ಸಂದೇಹವನ್ನುಂಟು ಮಾಡುವ ಹಾಗೆ ಅಪೂರ್ವ ರೂಪಲಾವಣ್ಯದ ರಮಣಿಯೊಬ್ಬಳು ತಿರುಗಾಡುತ್ತಿದ್ದಳು. ಯಾವುದೋ ಕೆಲಸವಾಗಿ ಅದೇ ಕೊಟಡಿಗೆ ಬಂದ ವಿರೂಪಾಕ್ಷನನ್ನು ನೋಡಿ ರಾಮರಾಯನು 'ಈ ಹೆಣ್ಣು ಯಾರು?' ಎಂದು ಕೇಳಿದನು.

'ಭರತರಾಯನ ಮಗಳು' ಎಂದ ವಿರೂಪಾಕ್ಷ.

ರಾಮರಾಯನು ತನ್ನ ತಮ್ಮನನ್ನು ದಿಟ್ಟಿಸಿ ನೋಡಿದನು. ಅವನ ಮುಖದಲ್ಲಿ ಏನೋ ಒಂದು ತರದ ನಗುವು ಮೂಡಿತು. 'ಸೆರೆಮನೆಯಲ್ಲಿ ಅಲ್ಲವೆ ನೀನು ಅವಳನ್ನು ಸೇರಿಸಬೇಕಾದುದು? ಮತ್ತೆ ಇದೇನು?' ಎಂದು ಕೇಳಿದಾಗ 'ಇಲ್ಲ, ಅಣ್ಣಾ, ಎಲ್ಲವನ್ನು ನಾನು ಸರಿಯಾಗಿಯೇ ಮಾಡಿರುವೆನು. ಸಾಧಾರಣ ಮನುಷ್ಯರನ್ನು ಹಾಕುವ ಸೆರೆಮನೆಯಲ್ಲಿ ಇವರುಗಳನ್ನು ತಳ್ಳುವುದು ಸರಿಯಲ್ಲವಲ್ಲ' ಎಂದು ಯುವರಾಜನು ಹೇಳಿದ. ರಾಮರಾಯನು ತನ್ನೊಳಗೆ ನಕ್ಕನು. ಇದನ್ನು ನೋಡಿದ ವಿರೂಪಾಕ್ಷನ ಮುಖವು ಬಾಡಿತು. 'ಅಣ್ಣಾ! ನೀನೇ ಬಂದು ನೋಡು, ಅವರೆಲ್ಲರೂ ಕಣ್ಣು ಕಣ್ಣೀರಾಗಿ......' ಎಂದು ಆರಂಭಿಸಿದನು.

'ಪಾಪ, ಕಣ್ಣೀರು ಸುರಿಸುತ್ತಾರೆಯೋ!' ಎಂದು ವ್ಯಂಗ್ಯವಾಗಿ ಅಂದು ರಾಮರಾಯನು ಕುಳಿತುಕೊಂಡನು. ಅವನ ಕಣ್ಣು ಕೆರಳಿದವು. ಬೇಸಿಗೆಯ ಮಧ್ಯಾಹ್ನದ ಸಮಯ. ವಿಶಾಲವಾದ ಆ ನಗರವೆಲ್ಲಾ ನಿಶ್ಶಬ್ದವಾಗಿತ್ತು. ನದಿಯ ತೀರದ ಮರಗಳು ಕಾದು ಬೇಗೆಯಾಗಿತ್ತು.

ಇನ್ನೂ ಬಹಳ ದೂರದಲ್ಲಿ ದಟ್ಟವಾಗಿ ಬೆಳೆದ ಕಾಡುಗಳ ಸಾಲು. ರಾಮ ರಾಯನ ಹಳೆಯ ನೆನಪುಗಳಿಗೆಲ್ಲಾ ರೆಕ್ಕೆಗಳು ಬೆಳೆದು ಎದುರಿಗೆ ಹಾರಿ ಬಂದು ಕೂತವು. ಅವನ ಮುಖದಲ್ಲಿ ವ್ಯಥೆಯು ನೆಲೆಗೊಂಡಿತು. ಏನು ವ್ಯಥೆಯೊ! ಅವನಿಗೂ ತಿಳಿಯದಂತೆ ಕಣ್ಣಿನಲ್ಲಿ ನೀರಿನ ಹನಿ ಮೂಡಿದವು. ತಟ್ಟನೆ ತಮ್ಮನ ಕಡೆ ತಿರುಗಿ 'ವಿರೂ, ನೋಡುವುದಕ್ಕೆ ಹೆಣ್ಣು ಹೇಗಿದ್ದಾಳೆ?' ಎಂದು ಕೇಳಿದನು. ವಿರೂಪಾಕ್ಷನ ಮುಖದಲ್ಲಿ ಒಡನೆಯೆ ರಕ್ತವು ಹರಡಿ ವಿವರ್ಣವಾದುದರಿಂದ ಬೇರೆ ಕಡೆ ತಿರುಗಿ 'ಚೆನ್ನಾಗಿಯೆ' ಎಂದು ಹೇಳಿ ಕೊಟಡಿಯನ್ನು ಬಿಟ್ಟು ಹೊರಟನು. ತಮ್ಮನ ಮುಖದಲ್ಲಿ ತೋರಿದ ಹೊಸ ಬದಲಾವಣೆಯನ್ನು ನೋಡಿ ರಾಮರಾಯನು ವಿಚಾರಮಗ್ನನಾದನು.

ಯೌವನದಲ್ಲಿ ತೋರುವ ಈ ಬಗೆಯ ಅನುಭವವು ಜೀವನದಲ್ಲಿ ಪ್ರೇಮವನ್ನೇ ಅರಿಯದ ರಾಮರಾಯನಿಗೆ ಅದೇನೋ ವಿಚಿತ್ರವಾಗಿ ಕಂಡಿರಬೇಕು. ವಿರೂಪಾಕ್ಷನು ಹೊರಟುಹೋದ ಮೇಲೆ ರಾಮ ರಾಯನು ಏನೂ ತೋಚದೆ ನಿಷ್ಕಾರಣವಾಗಿ ತನ್ನೊಳಗೆ ತಾನೆ ನಗು ತ್ತಿದ್ದನು.

ಒಂದು ದಿನ ಅರಮನೆಯ ಹೊರಗೆ ಭರತರಾಯನ ಮಗಳನ್ನು ರಾಮರಾಯನು ಸಂಧಿಸಬೇಕಾಯಿತು. ಆಗ ಆ ರಮಣಿಯು ಯಾವುದೋ ಹಳೆಯ ನೆನಪುಗಳಲ್ಲಿ ಮುಳುಗಿ ತನ್ಮಯಳಾಗಿದ್ದಳು. ಹಿಂದುಗಡೆಯಿಂದ ರಾಮರಾಯನು 'ರಮಣಿ! ನೀನು ಯಾರು?' ಎಂದು ಕೇಳಿದನು. ತಿರುಗಿ ನೋಡಿ ಗಂಭೀರವಾದ ಸ್ವರದಲ್ಲಿ 'ನನ್ನ ಹೆಸರು ಮಂಜರಿ' ಎಂದಳು ಅವಳು. ರಾಮರಾಯನು 'ನೀನಲ್ಲವೆ ಭರತರಾಯನ ಮಗಳು? ಎಲಾ ದುರದೃಷ್ಟವೆ, ನಿನ್ನ ತಂದೆಯನ್ನು ನೋಡುವ ಭಾಗ್ಯ ನನಗಿಲ್ಲವಲ್ಲ! ಅವನು ಎಲ್ಲಿದ್ದಾನೆ, ಗೊತ್ತಿದೆಯೊ' ಎಂದು ಕೇಳಿದನು.

ಈ ಚುರುಕಾದ ಮಾತುಗಳು ಮಂಜರಿಯ ಮನಸ್ಸಿನಲ್ಲಿ ರೋಷ ವನ್ನೂ ಕಣ್ಣುಗಳಲ್ಲಿ ನೀರನ್ನೂ ಬರಮಾಡಿದುವು. ಆ ಮನಕರಗುವ ದೃಶ್ಯವು ರಾಮರಾಯನಿಗೆ ಮಾತ್ರ ಬರಿಯ ವಿನೋದವಾಗಿತ್ತು.

'ಕೋಪಿಸಿಕೊಳ್ಳಬೇಡ. ನೀನು ಒಳ್ಳೆಯಕಾಲದಲ್ಲಿ ನನ್ನ ಕೈಗೆ ಸಿಕ್ಕಿದೆ! ಇಲ್ಲದಿದ್ದರೆ ನೀನು ಎಲ್ಲಿ ಇರುತ್ತಿದ್ದೆ, ಗೊತ್ತುಂಟೊ?' ಎಂದು ರಾಮರಾಯನು ಕೇಳಲು, 'ತುಂಗಭದ್ರೆಯ ನೀರಿನಲ್ಲಿ' ಎಂದು ರಮಣಿಯು ತಲೆ ಎತ್ತಿ ನೋಡಿ ನುಡಿದಳು. ನೀರು ತುಂಬಿದ ಅವಳ ಕಣ್ಣುಗಳು ಎರಡು ನಕ್ಷತ್ರಗಳಂತೆ ಬೆಳಕನ್ನು ಬೀರಿದವು. 'ರಾಮರಾಯರೆ! ಭದ್ರಾ ನದಿಯಲ್ಲಿ ಸ್ಥಳಕ್ಕೆ ಏನು ಕಮ್ಮಿ?' ಎಂದು ಕೇಳಿದಳು. ಇವಳ ರೋಷ ನೋಡಿ ರಾಮರಾಯನು ಕಲಕಲ ನಕ್ಕನು. ಮಂಜರಿ ಮಾತನ್ನಾಡದೆ ಪ್ರತಿಮೆಯಂತೆ ತಲೆಬಾಗಿಸಿ ನಿಂತಳು.

ರಾಮರಾಯನು ಮಂಜರಿಯನ್ನು ನೋಡಿ ಮತ್ತೊಮ್ಮೆ 'ನನ್ನ ಮಾತಿಗೆ ಉತ್ತರಕೊಡು' ಎಂದನು. ಅವಳಗಂಟಲು ದುಃಖದಿಂದ ಬಿಗಿದು ಬಂತು. ಅವಳು ಸ್ಥಳದಿಂದ ಹೊರಡಲು ಯತ್ನಿಸಿದಳಾಗಲಿ ರಾಮರಾಯನು ಅವಳನ್ನು ತಡೆದು 'ನಾನು ಹೇಳುವುದನ್ನು ಕೇಳುವುದಿಲ್ಲವೆ? ನನ್ನಮೇಲೆ ನಿನಗೆ ಕೋಪವೆ?' ಎಂದನು. ಮಂಜರಿಯು 'ರಾಯರೆ, ನನ್ನನ್ನು ಏಕೆ ಪರಿಹಾಸ ಮಾಡುತ್ತೀರಿ' ಎಂದಳು.

ರಾಮರಾಯನು 'ಪರಿಹಾಸವೇನೂ ಇಲ್ಲ. ಸತ್ಯವಾಗಿ ಹೇಳುತ್ತೇನೆ. ನನ್ನನ್ನು ನೀನು ವಿವಾಹವಾಗು' ಎನ್ನುತ್ತಲೇ ಮಂಜರಿ ಪಕಪಕನೆ ನಕ್ಕುಬಿಟ್ಟಳು. ನಗುವನ್ನು ತಡೆಯಲು ಅವಳೇನೊ ಯತ್ನಿಸಿದಳಾಗಲಿ ಸಾಧ್ಯವಾಗಲಿಲ್ಲ. ರಾಮರಾಯನು ಕೋಪಗೊಂಡು 'ರಮಣಿಯೆ! ನಾನು ಯಾವ ಮಾತಿನಲ್ಲಿ ಕಡಿಮೆಯಾಗಿದ್ದೇನೆ?' ಎಂದನು.

ರಾಮರಾಯನ ಕಡೆಗೆ ತಿರುಗಿ ಕೂಡ ನೋಡದೆ ಆ ರಮಣಿಯು ಆ ಸ್ಥಳವನ್ನು ಬಿಡಲು ಯತ್ನಿಸಿದಳು.

ರಾಮರಾಯನು ಅವಳನ್ನು ಹಿಂಬಾಲಿಸಿ 'ಮಂಜರಿ, ನಾನು ನಿನ್ನನ್ನು ಬಲಾತ್ಕಾರವಾಗಿ ಹೊಂದಬಹುದು. ಆದರೆ ನಾನು ಹಾಗೆ ಮಾಡುವವನಲ್ಲ.' ಎಂದು ಹೇಳುವಾಗ ಅವನ ಕಂಠವು ಬಿಗಿದುಬಂತು. 'ಮಂಜರಿ, ನಾನು ಪಡುವ ಹಿಂಸೆ ನಿನಗೆ ಗೊತ್ತಿದೆಯೆ. ನನಗೆ ಈ ಹೋರಾಟದ ಕೆಲಸದಲ್ಲಿ ಜುಗುಪ್ಸೆ ಬಂದುಹೋಗಿದೆ. ಸ್ವಲ್ಪವಾದರೂ

ನಿಶ್ಚಿಂತೆಯಿಂದ ತಲೆಯಿಡಲು ನನಗೆ ಕೊಂಚ ಸ್ಥಳ ಕೊಡಲಾರೆಯಾ?' ಎಂದು ದೈನ್ಯದಿಂದ ಕೇಳಿದನು.

ಮಂಜರಿಯು ಸ್ವಲ್ಪ ಅನುತಾಪದಿಂದ ಅವನು ಹೇಳುವುದನ್ನು ಕೇಳಿದಳು. ರಾಮರಾಯನು ನಿಟ್ಟುಸಿರು ಬಿಟ್ಟು ಸುಖಭೋಗವನ್ನು ಅರಿಯದೆ ವ್ಯರ್ಥವಾಗಿ ತನ್ನ ದಿನಗಳನ್ನು ಕಳೆದ ಮಾತನ್ನು ಆಕೆಯೊಡನೆ ಗದ್ಗದ ಸ್ವರದಲ್ಲಿ ಹೇಳಿಕೊಂಡನು. ಇದನ್ನು ಕೇಳಿ ಮಂಜರಿಯು ಆ ಸ್ಥಳದಿಂದ ವೇಗವಾಗಿ ನಡೆದುಬಿಟ್ಟಳು.

ಆ ದಿನ ಸಾಯಂಕಾಲ ಮಂಜರಿಯಿಂದ ರಾಮರಾಯನಿಗೆ ಒಂದು ಅಂದವಾದ ಕನ್ನಡಿಯೂ ಪತ್ರವೂ ಬಂದವು.

'ನೀವು ನಿಮ್ಮ ಹರೆಯದ ಬದುಕನ್ನೆಲ್ಲ ರಣರಂಗದಲ್ಲಿ ಕಳೆದು ಬಿಟ್ಟಿರಿ. ಯುದ್ಧರಂಗದ ಹುರುಪಿನ ಜೀವನದಲ್ಲಿ ಮುಖವನ್ನು ಕನ್ನಡಿಯಲ್ಲಿ ನೋಡಿಕೊಳ್ಳಲು ಅವಕಾಶವಾದರೂ ಎಲ್ಲಿ? ಪಾಪ, ಈಗಲಾದರೂ ಮುಖವನ್ನು ಚೆನ್ನಾಗಿ ನೋಡಿಕೊಳ್ಳಲಿಯೆಂದು ಕನ್ನಡಿಯನ್ನು ಕಳು ಹಿಸಿಕೊಟ್ಟಿದ್ದೇನೆ. ತಪ್ಪಾದರೆ ಕ್ಷಮಿಸಬೇಕು.' ಎಂದು ಆ ಕಾಗದದಲ್ಲಿ ಬರೆದಿತ್ತು.

ರಾಮರಾಯನು ಆ ಕಾಗದವನ್ನು ನೂರಾರು ಚೂರುಮಾಡಿ ಬಿಸಾ ಡಿದನು. ಆದರೆ ಅವನ ಕುತೂಹಲವು ಮಾತ್ರ ಅಳಿಯಲಿಲ್ಲ. ನಿಜವಾಗಿಯೂ ಆಗಲೆ ಅವನು ತನ್ನನ್ನು ಕನ್ನಡಿಯಲ್ಲಿ ನೋಡಿಕೊಂಡದ್ದು. ಇಪ್ಪತ್ತು ವರ್ಷಗಳ ಕಾಲ ನಾನಾ ವಿಧವಾದ ಕಷ್ಟಗಳನ್ನು ಎದುರಿಸಿ ಹೋರಾಡಿ ದುದರ ಚಿಹ್ನೆಗಳು ಅವನ ಮುಖದಲ್ಲಿ ಎದ್ದು ಕಾಣುತ್ತಿದ್ದವು. ಅವನ ತಲೆ ಯಲ್ಲಿ ಹುಡುಕಿ ನೋಡಿದರೂ ಒಂದು ಕಪ್ಪುಕೂದಲು ಕಾಣಬೇಕು ಹೇಗೆ? ತನ್ನ ಮುಖದ ಪ್ರತಿಬಿಂಬವನ್ನು ನೋಡುತ್ತಲೆ ಅವನಿಗೆ ಆಶ್ಚರ್ಯ ವಾಯಿತು. 'ಈ ರಮಣಿಯು ಹಾಸ್ಯಮಾಡಿದುದರಲ್ಲಿ ತಪ್ಪೇನಿದೆ? ಮುಖ ದಲ್ಲಿ ಮೊದಲಿದ್ದ ನಳಿತ ಈಗೆಲ್ಲಿದೆ! ಅಯ್ಯೋ ಬದುಕೆಲ್ಲವೂ ವ್ಯರ್ಥವಾಯಿ ತಲ್ಲ!' ಎಂದು ತನ್ನ ನರೆತ ತಲೆಕೂದಲನ್ನು ಎರಡು ಕೈಗಳಿಂದಲೂ ಕಿತ್ತು ಕೊಂಡನು. ಕನ್ನಡಿಯ ಮುಂದೆ ನಿಂತು ನೋಡಿ ನೋಡಿ ಮರುಗಿದನು.

2

ಆ ದಿನ ರಾತ್ರಿ ಮಧುರವಾದ ವೇಣುನಾದವು ಕೇಳಿಸಿತು. ಉದಾಸೀನತೆಯಿಂದ ಪ್ರೈಮರಿತು ನಿದ್ರೆಮಾಡುತ್ತಿದ್ದ ರಾಮರಾಯನ ಮನಸ್ಸಿನಲ್ಲಿಯೂ ಆ ರಮಣಿಯ ಮನಸ್ಸಿನಲ್ಲಿಯೂ ಬೇರೆ ಬೇರೆ ವಿಚಾರಗಳು ಮೂಡಿದುವು. ಒಂದು ಬಗೆಗೂಡದ ಮನೋರಥ; ಮತ್ತೊಂದು ಬಾಳ ಜೊತೆ ಇಲ್ಲದೆ ವ್ಯಥೆಯಲ್ಲಿ ಮುಳುಗಿದ ಮನಸ್ಸಿನಲ್ಲಿ ತೋರುವ ಪ್ರೇಮಿಗಳ ಅಮೃತಸ್ವಪ್ನ.

೩

ರಾಮನಗರದಲ್ಲಿ ಒಂದೇ ಕೋಲಾಹಲ. ಭರತರಾಯನು ಬಿಜಾಪುರದ ಸುಲ್ತಾನನ ಸಹಾಯ ಪಡೆದು ರಾಮನಗರವನ್ನು ಮುತ್ತುವನೆಂದು ವದಂತಿ.

ವಿರೂಪಾಕ್ಷನ ಕೋಣೆಯಲ್ಲಿ ಅಂದು ಕೊಳಲಿನ ದನಿ ಕೇಳಿಸಲಿಲ್ಲ. ಅದಕ್ಕೆ ಬದಲಾಗಿ ಅಲ್ಲಿ ಮಂತ್ರಾಲೋಚನೆಯ ಸಭೆಯು ರಹಸ್ಯವಾಗಿ ಸೇರಿತು. ನಿಪುಣನಾದ ರಾಜತಂತ್ರಿ ಪುಂಡರೀಕರಾಯನು ರಾಮರಾಯನನ್ನು ನೋಡಿ 'ದೊರೆಯೆ, ನೀವು ಈ ಸಲ ಸಮಾಧಾನವನ್ನು ತಾಳಬೇಕಾಗುವುದು. ಭರತರಾಯನಿಗೆ ಸೇರಿದ ಸ್ತ್ರೀಯರನ್ನು ನಾವು ಮರ್ಯಾದೆಯಿಂದ ಕಳುಹಿಸಿಬಿಡೋಣ. ನಮ್ಮ ಕೋಟೆಯನ್ನು ಇನ್ನೂ ಭದ್ರಪಡಿಸಿಲ್ಲ. ದುಡುಕಿ ಏನಾದರೂ ಮಾಡಿದರೆ ರಾಮನಗರವು ಸ್ಮಶಾನವಾಗಬಹುದು. ಆರು ತಿಂಗಳು ತಡೆದರೆ ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಬಹುದು.' ಎಂದು ಆಲೋಚನೆಯನ್ನು ಹೇಳಿದನು. ರಾಮರಾಯನು ಅಗಾಧವಾದ ವಿಚಾರದಿಂದ ಎಚ್ಚತ್ತವನಾಗಿ ಭರತರಾಯನ ಕುಟುಂಬದವರನ್ನು ಕರೆದುಕೊಂಡು ಹೋಗುವುದಕ್ಕೆ ಪಲ್ಲಕ್ಕಿಗಳನ್ನು ಸಿದ್ಧಮಾಡುವಂತೆ ಅಜ್ಞಾಪಿಸಿದನು

ಅದೇ ಹಳೆಯ ಮರ. ಹೂಗಳು ಉದುರಿ ನಾಲ್ಕು ದಿಕ್ಕುಗಳಲ್ಲಿಯೂ ಗಾಳಿ ಸುವಾಸನೆಯು ತುಂಬಿತ್ತು. ರಾಮರಾಯನು ಮರದ ಕೆಳಗೆ ಒರಗಿಕೊಂಡು ಭರತರಾಯನ ಕುಟುಂಬದ ಹೆಂಗಸರು ಹೊರಡುವ ದೃಶ್ಯವನ್ನು ಎವೆಯಿಕ್ಕದೆ ನೋಡುತ್ತಿದ್ದನು. ಹಸುರು ಬಣ್ಣದ ರೇಶ್ಮೆಯಿಂದ

ಅಲಂಕರಿಸಿದ ಮತ್ತು ಜರತಾರಿ ಕುಚ್ಚುಗಳು ತೂಗಾಡುತ್ತಿದ್ದ ಒಂದು ಪಲ್ಲಕ್ಕಿಯು ಅಲ್ಲಿಗೆ ಬಂತು. ಗೆಜ್ಜೆಗಳ ಕಿರುದನಿ ಕೇಳಿಬರಲು ರಾಮ ರಾಯನು ಅತ್ತ ತಿರುಗಿ ನೋಡಿದನು. ಮಂಜರಿಯು ಅಂದವಾದ ಉಡು ಪನ್ನು ಧರಿಸಿ ದೇವಕನ್ನಿಕೆಯ ಹಾಗೆ ಕಂಡಳು. ವಯಸ್ಸು ತುಂಬಿದ ರಾಮರಾಯನ ಮುಖದಲ್ಲಿ ಕಗ್ಗತ್ತಲೆಮೂಡಿತ್ತು. ಆಕೆಯ ಮುಖದಲ್ಲಿ ರಾಜ್ಯದ ಉತ್ಸಾಹವು ಪ್ರಕಾಶಮಾನವಾಗಿತ್ತು. ಮಂಜರಿಯು ರಾಮ ರಾಯನನ್ನು ನೋಡಿ ಮಧುರವಾದ ದನಿಯಲ್ಲಿ 'ಹೋಗಿಬರುತ್ತೇನೆ' ಎಂದು ನಸುನಕ್ಕು ಹೇಳಿದಳು. ಈ ಮಾತು ರಾಮರಾಯನಿಗೆ ಚೆನ್ನಾಗಿ ನಾಟಿತು. ಮಂಜರಿಯ ಅಗಲವಾದ ಕಣ್ಣುಗಳೆರಡೂ ತನ್ನನ್ನು ನೋಡು ತ್ತಿರುವ ಹಾಗೆ ಅವನಿಗೆ ಕಾಣಿಸಿತು. ಕಡೆಗಣ್ಣುಗಳಲ್ಲಿ ನೀರು ತುಂಬಿ ಬಂತು. ಸ್ವಲ್ಪ ಹೊತ್ತಿನಲ್ಲಿ ಪಳಪಳನೆ ಹರಿದು ಹೊರಟಿತು. ರಾಮ ರಾಯನಿಗೆ ಏನೂ ತೋಚಲಿಲ್ಲ. ಮಂಜರಿಯು ರಾಮರಾಯನ ಪಾದ ಗಳನ್ನು ಕಣ್ಣುಗಳಿಗೆ ಒತ್ತಿಕೊಂಡಳು. ರಾಮರಾಯನು ಹುಸಿನಗುವಿ ನಿಂದ ನರೆತಿದ್ದ ತನ್ನ ತಲೆಗೂದಲನ್ನು ಸವರಲು ಆರಂಭಿಸಿದನು. ಮಂಜ ರಿಯು ಕಣ್ಣುಗಳನ್ನು ಒರಸಿಕೊಂಡು ಮೋಡದ ಮಧ್ಯೆ ಥಳಕ್ಕನೆ ಹೊಳೆಯುವ ಮಿಂಚಿನಂತೆ ಒಮ್ಮೆ ನಕ್ಕಳು. ಮತ್ತೆ 'ನೀವು ಅಗತ್ಯವಾಗಿ ಬಂದು ನನ್ನನ್ನು ಕರೆದುಕೊಳ್ಳಬೇಕು. ಬರುವ ಕಾರ್ತಿಕ ಮಾಸದ ಶುಕ್ಲಾಷ್ಟಮಿಯ ದಿವಸ ನಾನು ನಮ್ಮ ಕೋಟೆಯ ಹೊರಗೆ ಇರುವ ಗುಡಿಗೆ ಪೂಜೆಮಾಡುವುದಕ್ಕೆ ಬರುವೆನು. ನಿಮ್ಮನ್ನು ನದಿಯ ತೀರದಲ್ಲಿ ಇದಿರು ನೋಡುತ್ತಿರುವೆನು. ನನ್ನನ್ನು ಕರೆದುಕೊಂಡು ಹೋಗುವು ದಕ್ಕೆ ತಾವು 'ಕೊಂಡಲ್' ಅನ್ನು ಜೊತೆಯಲ್ಲಿ ಕರೆತರಬೇಕು' ಎಂದು ಹೇಳಿ ಗೆಜ್ಜೆಯನ್ನು ಗಲಗಲ ಶಬ್ದ ಮಾಡಿ ರಾಜಕುಮಾರಿಯು ಪಲ್ಲಕ್ಕಿ ಯನ್ನು ಏರಿದಳು.

೪

ನೋಡುನೋಡುತ್ತಿರುವಾಗಲೆ ತುಂಗಭದ್ರಾ ನದಿಯ ದಡದಲ್ಲಿ ಒಂದು ಬ್ರಹ್ಮಾಂಡದಷ್ಟು ಗುಡಿಯು ಇಂದ್ರಜಾಲದಿಂದ ನಿರ್ಮಿತ

ವಾಗುತ್ತಿರುವ ಹಾಗೆ ದಿನದಿನಕ್ಕೆ ಬೆಳೆಯುತ್ತ ಬಂತು. ಆಕಾಶವನ್ನು ಸೋಕುವ ಆ ದೇವಸ್ಥಾನವನ್ನು ಕಂಡು ಜನಗಳು ಬೆರಗಾದರು. ಅದರಲ್ಲಿ ವಿಚಿತ್ರವಾಗಿ ಕಟ್ಟಿದ ಪ್ರಾಕಾರಗಳೆಷ್ಟು? ಗೋಪುರಗಳೆಷ್ಟು? ರಾಮರಾಯನು ತನ್ನ ಬೊಕ್ಕಸದಲ್ಲಿದ್ದ ಹಣವನ್ನೆಲ್ಲಾ ನದಿಯಲ್ಲಿ ಸುರಿದು ಈ ಅತಿಶಯವಾದ ಕೆಲಸವನ್ನು ನಡೆಸುತ್ತಾ ಹೋದನು. ಪ್ರಜೆಗಳೆಲ್ಲರೂ ಇದು ರಾಮರಾಯನ ಸಾಧನಾಪೀಠವೋ, ಯಾವ ದೇವರನ್ನು ಇಲ್ಲಿ ಪ್ರತಿಷ್ಠೆಗೊಳಿಸುವನೊ ಎಂದು ತಮ್ಮತಮ್ಮೊಳಗೆ ಅಂದುಕೊಂಡರು. ಇದರ ಮರ್ಮ ಯಾರಿಗೂ ಗೊತ್ತಾಗಲಿಲ್ಲ.

ಕಾರ್ತಿಕ ಸೋಮವಾರ. ಶುಕ್ಲಪಕ್ಷದ ಅಷ್ಟಮಿ. ಗಗನವೆಲ್ಲವೂ ಕಾರ್ಮೋಡದ ಕಗ್ಗತ್ತಲೆ. ಸಾಯಂಕಾಲದ ಸಮಯ. ರಾಮರಾಯನು ತನ್ನ ಕುದುರೆಯನ್ನು ಹತ್ತಿ ಪ್ರಯಾಣವಾದ. ಮಂಜರಿಯು ತಾನು ಹೇಳಿದ್ದುದನ್ನು ಮರೆಯಲಿಲ್ಲ. ರಾಯದುರ್ಗದ ದೇವಸ್ಥಾನದ ಹೊರಗೆ ಅವಳು ಕತ್ತಲು ಕವಿಯುತ್ತಿದ್ದ ದಿಕ್ಕನ್ನೇ ನೋಡುತ್ತ ನಿಂತಳು, ಅವಳ ಹೃದಯವು ಡವಡವ ಅನ್ನುತ್ತಿತ್ತು. ಅಷ್ಟರಲ್ಲಿ ಒಬ್ಬ ಕುದುರೆಯ ಸವಾರನು ಬಂದು ಅವಳನ್ನು ತನ್ನ ಕುದುರೆಯ ಮೇಲೆ ಕೂಡಿಸಿಕೊಂಡು ಹಾಗೆಯೆ ಹಾರಿ ಹೋದನು. ಕಾವಲಿನ ಆಳುಗಳು ಸ್ವಲ್ಪ ಹೊತ್ತು ದಿಟ್ಟಿಸಿ ನೋಡಿ ಅಲ್ಲಿಗೆ ಬಂದ ಮನುಷ್ಯನನ್ನು ಅಟ್ಟಿಸಿಕೊಂಡು ಓಡಿದರು. ಕೊಂಡಲ್ ಗಾಳಿಯ ವೇಗದಿಂದ ಓಡಿತು. ಅದನ್ನು ಹಿಂದೆ ಹಾಕಲು ಯಾರಿಗೆ ತಾನೆ ಸಾಧ್ಯ! ಮಂಜರಿಯೂ ರಾಮರಾಯನೂ ಸ್ವಲ್ಪ ಹೊತ್ತಿನಲ್ಲೇ ಕುದುರೆಯೊಡನೆ ಕಣ್ಣಿಗೆ ಕಾಣದಂತೆ ಕಗ್ಗತ್ತಲೆಯ ತೆರೆಯ ಹಿಂದೆ ಮರೆಯಾಗಿಹೋದರು.

ರಾಮನಗರಕ್ಕೆ ಬಂದು ಕೊಂಡಲ್ ನಿಂತಿತು. ಅದೇ ಬೆಳಕು ಹರಿಯುವ ಹೊತ್ತಾಗಿತ್ತು. ಬೆದರಿಹೋಗಿದ್ದ ಮಂಜರಿಯು ಕಣ್ಣುಗಳನ್ನು ಮುಚ್ಚಿಕೊಂಡು ರಾಮರಾಯನ ಎದೆಯ ಮೇಲೆ ಒರಗಿದ್ದಳು. ಬಾಲಸೂರ್ಯನ ಕಿರಣಗಳು ಅವಳ ಮುಖದ ಮೇಲೆ ಬಿದ್ದವು. ಹೃದಯದೊಳಗಿನಿಂದ ಉಕ್ಕಿಬಂದ ದಾಹದಿಂದ ರಾಮರಾಯನು ಅವಳ ಮುಖಕಮಲವನ್ನು ಸ್ವಲ್ಪ ಹೊತ್ತು ದಿಟ್ಟಿಸಿನೋಡಿ ಸುಖವಾದ ಹಾಸಿಗೆಯ ಮೇಲೆ

ಮೆತ್ತಗೆ ಮಲಗಿಸಿದನು. ವಿರೂಪಾಕ್ಷನನ್ನು ಕರೆದು ಅವಳಿಗೆ ಉಪಚಾರ ಮಾಡಿದ ಮೇಲೆ ರಾಮರಾಯನ ಮನಸ್ಸಿನಲ್ಲಿದ್ದ ತೃಷೆಯ ಪ್ರವಾಹವು ದಡವನ್ನು ಮೀರಿ ಓಡಿತು. ಭರತರಾಯನ ಬೆದರಿಕೆಗೆ ಅಡಗಿ ಅವನೊಡನೆ ಸಮಾಧಾನ ಮಾಡಿಕೊಂಡ ಷರತ್ತನ್ನು ಅವನು ಮರೆತುಹೋದನು. ಮಂಜರಿಯು ದೊರೆತುದೇ ಸಾಕುಯೆಂದು ತೃಪ್ತಿಗೊಂಡನು. ವಿರೂಪಾಕ್ಷನನ್ನು ಕರೆದು ಅವನು 'ನಾಳೆ ಸಾಯಂಕಾಲ ಕತ್ತಲಾಗುತ್ತಲೆ ಮಂಜರಿಯನ್ನು ಯಾರಿಗೂ ತಿಳಿಯದಂತೆ ನದಿಯ ಮಧ್ಯದಲ್ಲಿರುವ ಆ ಗುಡಿಗೆ ಕರೆದು ತಂದುಬಿಡು. ನಾನು ಕಾದುಕೊಂಡು ಇರುವೆನು. ಎಚ್ಚರಿಕೆ!' ಎಂದು ಹೇಳಿದನು.

ವಿರೂಪಾಕ್ಷನು 'ಅಣ್ಣಾ! ಸ್ವಲ್ಪಹೊತ್ತು ವಿಶ್ರಮಿಸಿಕೊಂಡು ಹೊರಡಿರಿ' ಎಂದನು.

ರಾಮರಾಯನು 'ಎಲ್ಲಿದೆ ನನಗೆ ಬಿಡುವು? ಇನ್ನೂ ಶಿಖರದಲ್ಲಿ ಬಂಗಾರದ ಕಲಶಗಳನ್ನು ಸ್ಥಾಪನೆ ಮಾಡಿಸಬೇಕು. ನಾಳೆ ದೇವಿಯ ಪ್ರತಿಷ್ಠೆ ಮಾಡಬೇಕು' ಎಂದನು. ರಾಮರಾಯನಿಗೆ ಆನಂದವು ಉಕ್ಕಿ ಬಂದಿತು.

ಮರುದಿನ ಗುಡಿಯ ಶಿಖರದಲ್ಲಿ ಬಂಗಾರದ ಕಲಶ ನಿಂತವು. ಮಿಕ್ಕ ಎಲ್ಲಾ ಕೆಲಸಗಳೂ ಮುಗಿದು ಬಂದಿದ್ದುವು. ಅಂದು ಸಾಯಂಕಾಲ ಲಕ್ಷೋಪಲಕ್ಷ ಮಣಿದೀಪಗಳಿಗೆ ತುಪ್ಪ–ಬತ್ತಿಹಾಕಿ ಸಿದ್ಧವಾಗಿತ್ತು. ನದಿಯಲ್ಲಿ ಅರಳಿದ ಕೆಂದಾವರೆ ಹೂಗಳು ದೋಣಿ ದೋಣಿಗಳಲ್ಲಿ ಬಂದು ರಾಶಿಯಾಗಿ ಬಿದ್ದವು.

ಇಷ್ಟು ಹೂಗಳು ಏತಕ್ಕೋ?

ರಾಮರಾಯನ ಅಂತರಂಗದ ದೇವಿಯ ಪೂಜೆಗೊಸ್ಕರವೆ?

ರಾತ್ರಿ ಎರಡನೆಯ ಜಾಮವು ಕಳೆಯಿತು. ರಾಮರಾಯನ ಅಂತರಂಗ ಪೂಜೆಯಾದುದರಿಂದ ಯಾರೂ ಗುಡಿಯಲ್ಲಿ ಇರಲಿಲ್ಲ. ವಿಚಿತ್ರವಾದ ಆ ಗುಡಿಯ ಮೇಲೆ ಎಣಿಸಿದಹಾಗೆ ನಾಲ್ಕೆಂಟು ನಕ್ಷತ್ರಗಳು ಮಿನುಗು

ತ್ತಿದ್ದುವು. ಪ್ರಾಕಾರದಲ್ಲಿ ಉರಿಯುತ್ತಿದ್ದ ಮಣಿದೀಪಗಳು ಒಂದೊಂದಾಗಿ ಆರುತ್ತಾ ಬಂದವು. ಉಸ್ ಉಸ್ ಎಂದು ಗಾಳಿಯು ಬಂದು ನದಿಯ ನೀರನ್ನು ಕಲಕಿ ತೆರೆಯಾಡಿಸಿ ಹೊರಟಿತು. ಮಂಜರಿಯನ್ನು ಕರೆದುಕೊಂಡು ದೋಣಿ ಬರಬಹುದೆಂಬ ಆಶೆಯಿಂದ ರಾಮರಾಯನು ಚಟ್ಟನೆ ಎದ್ದನು. ನದಿಯ ಮೇಲೆ ಏನೂ ಕಾಣಲಿಲ್ಲ. ಶುಭ್ರವಾಗಿದ್ದ ಗಗನಮಂಡಲದಲ್ಲಿ ಮೋಡವು ಕವಿಯಿತು. ಹೊತ್ತು ಆಗುತ್ತ ಆಗುತ್ತ ರಾಮರಾಯನಿಗೆ ತಾನು ಯಾವುದೋ ಒಂದು ಭಯಂಕರವಾದ ಪ್ರೇತ ಪುರಿಯಲ್ಲಿ ಇರುವಹಾಗೆ ಅನುಭವವಾಯಿತು. ಕವಿದಿದ್ದ ಕತ್ತಲೆಯಲ್ಲಿ ತಾನು ಓ ಎಂದು ಕೂಗುತ್ತ ಅಲೆಯುವಹಾಗೆ ಭ್ರಮೆಗೊಂಡನು. ಮೈಯಲ್ಲಿ ಬಲವಾಗಿ ನಡುಕವು ಪ್ರಾರಂಭವಾಯಿತು. ಆದರೂ ಇದೆಲ್ಲ ಬರಿಯ ಕನವರಿಕೆಯೆಂದು ಆ ಭಾವನೆಯನ್ನು ತಳ್ಳಿಬಿಟ್ಟು ಗಟ್ಟಿಯಾಗಿ ನಕ್ಕನು. ಕತ್ತಲು ಕವಿದಿದ್ದ ನದಿಯನ್ನು ನೋಡಿ ಅವನು 'ಏರೂ! ಏರೂ!' ಎಂದು ಕೂಗಿದನು. ಮಾರುತ್ತರ ಬರಲಿಲ್ಲ. ಗಾಳಿಯು ಮಾತ್ರ ತನ್ನ ಉತ್ತರವನ್ನು ಕೊಟ್ಟಿತು. ನದಿಯ ಅಲೆಗಳು ಅವನನ್ನು ಹಾಸ್ಯ ಮಾಡುವಂತೆ ಗುಡಿಯ ಮೆಟ್ಟಲುಗಳ ಮೇಲೆನತನಕ ಏರಿಬಂದವು. ತನಗೆ ತಾನೇ ಛೀ ಎಂದುಕೊಂಡು ಅವನು ಗೋಪುರದ ಬಾಗಿಲಲ್ಲಿ ಬಂದು ನಿಂತನು. ಗುಡಿಯಲ್ಲಿ ಒಂದು ದೀಪವಾದರೂ ಉರಿಯುತ್ತಿರಲಿಲ್ಲ.

ರಾಮರಾಯನು ಯತ್ನ ಮೀರಿ ಕಣ್ಣುಮುಚ್ಚಿದನು.

೫

ಶೀತಲಸ್ಪರ್ಶದ ಅನುಭವವಾಗುತ್ತಲೇ ರಾಮರಾಯನು ಬೆಚ್ಚಿಬಿದ್ದು 'ಮಂಜರಿ! ಬಂದುಬಿಟ್ಟೆಯಾ?' ಎಂದು ಕೇಳಿದ. ಪುಂಡರೀಕರಾಯನು ನಮಸ್ಕರಿಸಿ 'ಇಲ್ಲ, ದೊರೆಯೆ! ನಾನು ಪುಂಡರೀಕ!' ಎಂದನು.

'ಮಂಜರಿಯೆಲ್ಲಿ? ನಿನ್ನೊಡನೆ ಬರಲಿಲ್ಲವೆ?'

'ಇಲ್ಲ ಪ್ರಭು! ರಾಜಕುಮಾರಿಯು ತನ್ನ ಗಂಡನೊಡನೆ ಹೊರಟು

ಹೋದಳು. ವಿರೂಪಾಕ್ಷರಾಯರು, ತನ್ನನ್ನೂ ಆಕೆಯನ್ನೂ ಮನ್ನಿಸಬೇಕೆಂದು ಕೇಳಿಕೊಳ್ಳಲು ನನ್ನನ್ನು ತಮ್ಮಲ್ಲಿಗೆ ಕಳುಹಿಸಿದ್ದಾರೆ.'

ರಾಮರಾಯನು ಹುಚ್ಚು ಹಿಡಿದವನಂತೆ ಪಕಪಕನೆ ನಕ್ಕನು. ಅನಂತರ 'ವಿರೂ ಏನು ಹೇಳಿ ಹೋದ?' ಎಂದು ಕೇಳಿದ.

'ಮಂಜರಿಯು ತನ್ನ ಪತ್ನಿಯೆಂದೂ ಎಂಟು ತಿಂಗಳ ಹಿಂದೆಯೇ ಇದೇ ರಾಮನಗರದ ಮಾಳಿಗೆಯ ಮೇಲೆ ಸೂರ್ಯಚಂದ್ರರ ಸಾಕ್ಷಿಯಾಗಿ ಇಬ್ಬರೂ ಗಾಂಧರ್ವವಿವಾಹ ಮಾಡಿಕೊಂಡರೆಂದೂ ಭರತರಾಯನ ವಶದಿಂದ ಮಂಜರಿಯನ್ನು ಕರೆತರಲು ತಾವು ಮತ್ತು ತಮ್ಮ ಕೊಂಡಲ್ ಅಲ್ಲದೆ ಉಳಿದವರು ಯಾರಿಂದಲೂ ಸಾಧ್ಯವಿಲ್ಲವಾದುದರಿಂದ ತಮ್ಮನ್ನು ಅದಕ್ಕೆ ಉಪಯೋಗಿಸಿಕೊಂಡುದಾಗಿ ತಿಳಿಸಿ ತಮ್ಮ ಕ್ಷಮೆಯನ್ನು ಬೇಡಲು ನನ್ನನ್ನು ಇಲ್ಲಿಗೆ ಕಳುಹಿಸಿದರು.'

'ಹಾಗೆಯೇ!' ಎಂದು ಒಂದು ದೊಡ್ಡ ನಿಟ್ಟುಸಿರು ಬಿಟ್ಟು, ಮುದಿ ಅರಸನು 'ರಾಣಿ ಮಂಜರಿಯು ಏನಾದರೂ ಸಮಾಚಾರ ಹೇಳಿದಳೆ?' ಎಂದು ಕೇಳಿದನು. ಅದಕ್ಕೆ ಮಂತ್ರಿಯು 'ತನ್ನ ಕಾರ್ಯಸಾಧನೆಗಾಗಿ ತಂತ್ರ ಹೂಡಿದುದಕ್ಕಾಗಿ ತಮ್ಮ ಕ್ಷಮಾಪಣೆಯನ್ನು ಕೇಳಿದಳು' ಎಂದು ಹೇಳಿದನು.

ಬೆಳಗಾದ ಮೇಲೆ ಮಂತ್ರಿಯು ಅಲ್ಲಿಂದ ಹೊರಡುವುದಕ್ಕೆ ಅನುಮತಿಯನ್ನು ಪಡೆಯಲು ಬಂದಾಗ ಮುದಿ ಅರಸನು ಯಾವುದೋ ಚಿಂತೆಯಲ್ಲಿ ಮುಳುಗಿದ್ದನು. ಮಂತ್ರಿಯನ್ನು ನೋಡಿ 'ಅಲ್ಲಿ ನೋಡು, ನೀರಿನಲ್ಲಿ ಆ ನೆಳಲು ಬಿದ್ದಿರುವುದನ್ನು ನೋಡು, ನಾನೂ ಒಂದು ನೆಳಲಿನ ಹಾಗೆ. ನಾನು ಮುದುಕನಾಗಿರುವುದು ನಿಜವೇ?' ಎಂದು ಕೇಳಿದನು.

ಹುಚ್ಚು ಹಿಡಿದಿರುವವರ ಕಣ್ಣಿನಲ್ಲಿ ಇರುವ ಒಂದು ಅಸ್ಥಿರವಾದ, ಸುತ್ತಿ ಅಲೆದಾಡುತ್ತ ಹೊರಳುವ ನೋಟವು ಅವನ ಕಣ್ಣುಗಳಲ್ಲಿ ತಾಂಡವವಾಡಿತು.

'ಮಂತ್ರಿ! ನೀನು ಒಂದು ಕೆಲಸವನ್ನು ಮಾಡಬೇಕು. ಈ ಗುಡಿಯನ್ನು ಕಟ್ಟಿದವರಿಗೆ ನಾನು ಇನ್ನೂ ಯಾವ ಸನ್ಮಾನವನ್ನೂ ಮಾಡಿಲ್ಲ.

ಅವರನ್ನು ನೀನು ಇಲ್ಲಿಗೆ ಕಳುಹಿಸಿಕೊಡು. ನೀನು ಸುಖವಾಗಿ ರಾಮ ನಗರವನ್ನು ಆಳು' ಎಂದು ಮನಸ್ಸನ್ನು ಬಿಚ್ಚಿ ಹೇಳಿದನು.

ಶಿಲ್ಪಿಗಳೇ ಮೊದಲಾದವರು ಬಂದು ಸೇರಿದರು. ಸೂರ್ಯನ ಬೆಳಕಿನಲ್ಲಿ ಬಂಗಾರದ ಕಲಶಗಳು ಥಳಥಳನೆ ಮೆರೆದವು. ರಾಮರಾಯನು ಅವರಿಗೆ ಸಂಜ್ಞೆಮಾಡಿ ಅವುಗಳನ್ನು ಕಿತ್ತು ತರುವಹಾಗೆ ಆಜ್ಞಾಪಿಸಿದನು. ಹಿಂದಿನ ದಿನ ಬಹಳ ಕಷ್ಟದಿಂದ ಕೂಡಿಸಿ ನಿಲ್ಲಿಸಿದ ಕಲಶಗಳನ್ನು ಒಂದು ಕ್ಷಣದಲ್ಲಿ ಕಿತ್ತುಕೊಂಡು ಬಂದುದಾಯಿತು.

ರಾಮರಾಯನಿಗೆ ಬುದ್ಧಿಯು ಸ್ವಾಧೀನದಲ್ಲಿಲ್ಲವೆಂದು ಎಲ್ಲರೂ ಹೇಳಿಕೊಂಡರು. ಯಾರಿಗೂ ಅವನನ್ನು ಮಾತನಾಡಿಸುವ ಧೈರ್ಯವಿರಲಿಲ್ಲ. ಕೆಲವರು ಆತನಿಗೆ ಚಿತ್ತಭ್ರಮೆ ಹಿಡಿಯಿತೆಂದು ಸುದ್ದಿ ತಿಳಿಸಲು ನಗರದ ಕಡೆಗೆ ಓಡಿದರು. ರಾಮರಾಯನು ಒಳಗೆ ಇದ್ದ ಪೀಠವನ್ನು ಒಡೆದು ಅದರಲ್ಲಿದ್ದ ದೊಡ್ಡ ದೊಡ್ಡ ವಿಗ್ರಹಗಳನ್ನು ಹೊರಗೆ ತಂದು 'ಒಡೆಯಿರಿ, ಗುಡಿಯನ್ನು ಒಡೆದು ಕೆಡವಿರಿ!' ಎಂದು ಭಯಂಕರವಾದ ಕೇಕೆ ಹಾಕಿದನು. ಹಿಡಿಹಿಡಿಯಾಗಿ ಬಂಗಾರದ ನಾಣ್ಯಗಳನ್ನು ಎಲ್ಲರಿಗೂ ಬಾಚಿಕೊಟ್ಟನು. ಬಂಗಾರದ ಕಾಸುಗಳನ್ನು ನಾಲ್ಕು ದಿಕ್ಕಿಗೂ ಚೆಲ್ಲಾಪಿಲ್ಲಿಯಾಗಿ ಎರಚಿ 'ಒಡೆಯಿರಿ!......ಒಡೆಯಿರಿ!' ಎಂದು ಗಟ್ಟಿಯಾಗಿ ಕೂಗಿ ತಾನೇ ಒಂದು ಹಾರೆಯನ್ನು ಕೈಯಲ್ಲಿ ತೆಗೆದುಕೊಂಡು ಆವೇಶದಿಂದ ಗೋಪುರದ ಮೇಲಕ್ಕೆ ಹತ್ತಲಾರಂಭಿಸಿದನು. ತಪತಪನೆ ಕಲ್ಲುಗಳು ದೂರಾಗಿ ಬೀಳಲಾರಂಭಿಸಿದವು. ತಿಂಗಳುಗಟ್ಟಲೆ ಕೆಲಸಮಾಡಿ ಬಹಳ ಜಾಗರೂಕತೆಯಿಂದ ಕೆತ್ತಿದ ಸಜೀವ ಪ್ರತಿಮೆಗಳು ಛಿನ್ನಭಿನ್ನವಾಗಿ ನದಿಯಲ್ಲಿ ಉರುಳಿದವು. ರತ್ನದಾಸನು ಶಿಲ್ಪಿಗಳಲ್ಲಿ ಪ್ರಸಿದ್ಧನಾದವನು; ಕೈಲಾಗದೆ ಆ ಮುದುಕ ಗುಡಿಯ ಒಂದು ಮೂಲೆಯಲ್ಲಿ ಬಿಕ್ಕಿ ಬಿಕ್ಕಿ ಅಳುತ್ತಿದ್ದನು. ಹುಚ್ಚು ಹಿಡಿದ ರಾಮರಾಯನು ಇದನ್ನು ಗಮನಿಸಿ ಒಡನೆಯೇ ಕೆಳಗೆ ಇಳಿದು ತನ್ನ ಮುಖವನ್ನು ಶಿಲ್ಪಿಯ ಮುಖದ ಮೇಲೆ ಇಟ್ಟುಕೊಂಡು 'ಏಕೆ ಕಣ್ಣೀರು ಸುರಿಸುವೆ? ತಲೆ ಸರೆತಿದೆಯೆಂದೇ? ಛೀ, ಅಳಬೇಡ ನನ್ನೊಂದಿಗೆ ಬಾ!' ಎಂದನು.

ಜನಗಳು ಏನೂ ತೋಚದೆ ನೋಡುತ್ತಿದ್ದ ಹಾಗೆಯೇ ರಾಮರಾಯನು ತುಂಗಭದ್ರೆಯಲ್ಲಿ ಧುಮುಕಿದನು. 'ಅಯ್ಯೋ, ಅಯ್ಯೋ!' ಎಂದು ನಾನಾ ದಿಕ್ಕುಗಳಲ್ಲಿಯೂ ಕೂಗು ಕೇಳಿಸಿತು. ಸರಸರನೆ ಅವನನ್ನು ಹಿಡಿಯಲು ಎಷ್ಟೋ ಜನರು ನದಿಯಲ್ಲಿ ಧುಮುಕಿದರು. ಆದರೆ ಆವರ ಕೈಗಳಿಗೆ ರಾಮರಾಯನೇ ಸಿಕ್ಕುವವನು!

† † † †

ನಮ್ಮ ದೋಣಿಯೂ ಆ ಆಶ್ಚರ್ಯಕರವಾದ ಸ್ಥಳವನ್ನು ದಾಟಿತು. ಅದೇ ಸ್ಥಳದಲ್ಲಿ ಅಲ್ಲವೆ ಒಬ್ಬ ಅಪ್ರತಿಮನಾದ ಮಹಾವೀರನ ಮನಸ್ಸಿನ ಕೋಟೆಯು ಒಡೆದು ಮಣ್ಣಾಗಿ ಹೋದುದು. ಆ ಮಹಾಪುರುಷನ ವ್ಯರ್ಥ ಮನೋರಥದ ಗುರುತಲ್ಲವೆ ತುಂಗಭದ್ರೆಯ ಮಧ್ಯದಲ್ಲಿರುವ ಈ ಹಾಳುಬಿದ್ದ ಶಿಲ್ಪದ ಕೃತಿಗಳು.



# ಕಾಗದವೂ ಕಣ್ಣೀರೂ

**ಶ್ರೀಮಾನ್ ಕೃಷ್ಣಮೂರ್ತಿಯವರು** ಸುಪ್ರಸಿದ್ಧ ತಮಿಳು ವಾರ ಪತ್ರಿಕೆ 'ಆನಂದ ವಿಕಟನ್'ದ ಸಂಪಾದಕರು. 'ಕಲ್ಕಿ' ಎಂಬ ಉಪ ನಾಮಧೇಯದಿಂದ ಇವರು ಪ್ರಸಿದ್ಧರಾಗಿದ್ದಾರೆ. ಕಥೆಗಳೇ ಅಲ್ಲದೆ ಇವರು ರಾಜನೀತಿಯನ್ನು ಕುರಿತು ಅನೇಕ ಹಾಸ್ಯ ಮತ್ತು ವ್ಯಂಗ್ಯದಿಂದ ಕೂಡಿದ ಲೇಖನಗಳನ್ನು ಬರೆಯುತ್ತಾರೆ. ಭಾಷೆ ಇವರದು ಅತಿ ಸರಳ. ಇದೇ ಕಾರಣ ಇವರ ಪತ್ರಿಕೆಯು ಇಷ್ಟೊಂದು ವ್ಯಾಪ್ತಿಗೆ ತಮಿಳುನಾಡಿನಲ್ಲಿ 'ಆನಂದ ವಿಕಟನ್' ಅನ್ನು ತರಿಸಿ ಓದದ ಮನೆಯೇ ಇಲ್ಲ ಎಂದರೆ ಅತಿಶಯೋಕ್ತಿಯಾಗಲಾರದು.

ಕಾಗದವೂ ಕಣ್ಣೀರೂ ಎಂಬ ಇವರ ಕಥೆ ಜನರ ಮೆಚ್ಚಿಕೆಯನ್ನು ಪಡೆದಿದೆ. ಭಾರತದ ಅನೇಕ ಭಾಷೆಗಳಿಗೆ ಇದು ಈಗಾಗಲೇ ಅನುವಾದಿತ ವಾಗಿದೆ. ಉದಾತ್ತ ಪ್ರೇಮವು ಒಬ್ಬ ವ್ಯಕ್ತಿಯನ್ನು ಯಾವ ರೀತಿಯಲ್ಲಿ ಸೇವಾಪರಾಯಣನನ್ನಾಗಿ ಮಾಡುತ್ತದೆ ಎಂಬುದೇ ಈ ಕಥೆಯಲ್ಲಿ ನಿರೂಪಿತವಾಗಿರುವುದು. ತೋಡಿದ ಭಾವಿಗೆ ನೀರೇ ಸಾಕ್ಷಿ ಎಂಬಂತೆ ಕರುಣಾ ರಸ ಪ್ರವಾಹಕ್ಕೆ ಸಾಕ್ಷಿಯೆನಿಸಿದ ಕಣ್ಣೀರನ್ನು ಸುರಿಯಿಸಿ, ಹಿಂದಿನ ನೆನಪು ಗಳ ನೆಲವನ್ನು ತೇವಮಾಡಿಕೊಂಡು ಸುಲಭವಾಗಿ ಅದನ್ನು ಅಗೆದು ತೋರಿಸಿದ್ದಾರೆ ಈ ಕತೆಯಲ್ಲಿ.

೧

ಸುಪ್ರಸಿದ್ಧವಾದ ಮಹಿಳಾ ವಿದ್ಯಾಲಯದ ಸ್ಥಾಪಕರೂ ಮತ್ತು ಅದರ ಮುಖ್ಯರೂ ಆದ ಸೋದರಿ ಅನ್ನಪೂರ್ಣಾದೇವಿಯು ವಿದ್ಯಾಲಯದ ಸುತ್ತಲೂ ಇದ್ದ ತೋಟದಲ್ಲಿ ಎಂದಿನಂತೆ ಅಡ್ಡಾಡುತ್ತಿದ್ದರು. ವಿದ್ಯಾಲಯಕ್ಕೆ ಸ್ವಲ್ಪ ದೂರದಲ್ಲಿ ಇದ್ದ ಒಂದು ಬಂಗಲೆಯಿಂದ ನಾಗಸ್ವರದ ಗೀತವು ಕೇಳಿಸಿಬಂದು ಅವರಿಗೆ ಹಲವು ಹಳೇ ಮಾತುಗಳ ನೆನಪನ್ನುಂಟು ಮಾಡಿತು. ಯಾವಾಗಲೂ ಶಾಂತವಾಗಿರುವ ಅವರ ಮುಖದಲ್ಲಿ ಒಂದು ನಿಮಿಷಹೊತ್ತು ಬೇಸರವು ತಲೆದೋರಿ ಕೂಡಲೇ ಮಾಯವಾಯಿತು. ಅನಂತವೂ ಅಪ್ರಮೇಯವೂ ಆದ ಸಮುದ್ರದಲ್ಲಿ ತಟ್ಟನೆ ಒಂದು ದೊಡ್ಡ ಅಲೆಯೆದ್ದು ದಂಡೆಯ ಅಂಚಿನಲ್ಲಿರುವ ಬಂಡೆಯಮೇಲೆ ಹಾದು ಅದನ್ನು ಒಂದು ಕ್ಷಣ ಮುಳುಗಿಸಿ, ಮರುಕ್ಷಣ ಹಿಂದಕ್ಕೆ ಹೊರಟು, ಪುನಃ ಸಮುದ್ರವನ್ನೇ ಕೂಡಿಕೊಂಡ ಹಾಗಿತ್ತು ಆ ದೃಶ್ಯ. ಅಲೆಯು ಹೊಡೆದು ಹಾಯಿತೆಂಬುದಕ್ಕೆ ಗುರುತಾಗಿ ಬಂಡೆಯಲ್ಲಿರುವ ಹಳ್ಳತಿಟ್ಟುಗಳಲ್ಲಿ ನೀರು ನಿಂತಿರುವಹಾಗೆ ಅನ್ನಪೂರ್ಣಾಯವರ ಕಣ್ಣುಗಳಲ್ಲಿಯೂ ಕಣ್ಣೀರು ತುಂಬಿಕೊಂಡಿತ್ತು.

ಅದೇ ಹೊತ್ತಿಗೆ ವಿದ್ಯಾಲಯದ ಸಹೋಪಾಧ್ಯಾಯಿನಿ ಶ್ರೀಮತಿ ಸಾವಿತ್ರಿ, ಎಂ. ಎ. ಎಲ್. ಟಿ. ಯವರು ಎದುರಾಗಿ ಬರುತ್ತಿರುವುದನ್ನು ಕಂಡು ಒಡನೆಯೇ ಅನ್ನಪೂರ್ಣಾದೇವಿ ಕಣ್ಣೀರನ್ನು ಬೇಗಬೇಗನೆ ಒರಸಿಕೊಂಡು, ಮುಗುಳ್ನಗೆಯಿಂದ ಸಾವಿತ್ರಿಯನ್ನು ಬರಮಾಡಿಕೊಂಡರು. ಇಬ್ಬರೂ ಸಮೀಪದಲ್ಲೇ ಬೇವಿನಮರದ ಕೆಳಗಿದ್ದ ಸಿಮೆಂಟು ಬೆಂಚಿನ ಮೇಲೆ ಕುಳಿತುಕೊಂಡರು.

ಹೆಣ್ಣುಮಕ್ಕಳ ಸೇವೆಯಲ್ಲಿಯೇ ತಲೆನರೆತು ಹೋದವರೆಂದರೆ, ಅದು ಸೋದರಿ ಅನ್ನಪೂರ್ಣೆಗೆ ಮಾತ್ರ ಸರಿಹೋಗುತ್ತಿತ್ತು. ಅವರ ಹಣೆಯನ್ನು ಕವಿದಂತೆ ದಟ್ಟವಾಗಿ ಬೆಳೆದಿದ್ದ ಬಿಳಿಯ ಕೇಶರಾಶಿಯನ್ನು ನೋಡಿದಾಗ ಬೆಟ್ಟದ ಶಿಖರಗಳಮೇಲೆ ಪದರಪದರವಾಗಿ ಇಳಿದಿರುವಂಥ

ಬಿಳಿಯ ಮೋಡಗಳ ಸಾಲು ನೆನಪಿಗೆ ಬರುತ್ತದೆ. ತಲೆಯು ಈ ಪರಿಯಾಗಿ ನರೆತಿದ್ದರೂ ಅವರ ಮುಖವನ್ನು ನೋಡಿದವರಿಗೆ ಅವರ ವಯಸ್ಸು ಐವತ್ತಕ್ಕೆ ಮೀರಿದೆಯೆಂದು ಹೇಳಲು ಸಾಧ್ಯವಿರುತ್ತಿದ್ದಿಲ್ಲ. ಅನಂತ ಯೌವನದ ರಹಸ್ಯವನ್ನು ಇವರು ಕಂಡುಹಿಡಿದಿರುವರೇನೊ ಎಂದು ಸಹ ತೋರುವುದು. ಬಳ್ಳಿಯ ವರ್ಚಸ್ಸಿನಿಂದಲೂ, ಬಿಳಿಯ ಕೇಶರಾಶಿಯ ತಲೆಯಿಂದಲೂ ಶಾಂತತೆಯಿಂದ ಕೂಡಿರುವ ಮುಖದಿಂದಲೂ ತೋರುವ ಅನ್ನಪೂರ್ಣೆಯವರನ್ನು ನೋಡುವವರು ಅವರನ್ನು ಸರಸ್ವತಿಯ ಅವತಾರವೆಂದೇ ಬಗೆಯುವರು.

ಅನ್ನಪೂರ್ಣೆಯ ಜೀವನದ ಸಂಗತಿ ಎಲ್ಲರಿಗೂ ಚೆನ್ನಾಗಿ ತಿಳಿದ ವಿಷಯ. ಒಂಭತ್ತನೆಯ ವಯಸ್ಸಿನಲ್ಲಿ, ತಿಳಿವಳಿಕೆ ಬರುವ ಮೊದಲೇ ವೈಧವ್ಯದ ಗೋಳಿಗೆ ತುತ್ತಾಗುವ ದೌರ್ಭಾಗ್ಯವನ್ನು ಪಡೆದವರು ಅವರು. ಅವರ ದೌರ್ಭಾಗ್ಯವೇ ಹೆಣ್ಣುಜಾತಿಗೆ ಸೌಭಾಗ್ಯವಾಯಿತು. ಹಿಂದಿನ ಕಾಲದಲ್ಲಿಯೇ ಅವರು ಪಾಠಶಾಲೆಗೆ ಸೇರಿ, ಆಸಕ್ತಿಯಿಂದ ಓದಿ ಕಡೆಗೆ ಬಿ. ಎ. ಎಲ್. ಟಿ. ಪದವಿಯನ್ನು ಪಡೆದರು. ಅದು ಮೊದಲು ಎಳೆಯ ವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡವರು, ಗಂಡನಿಂದ ತ್ಯಜಿಸಲ್ಪಟ್ಟವರು, ಅನಾಥೆಯರಾದ ಹುಡುಗಿಯರು—ಮೊದಲಾದವರಿಗೆ ಸಹಾಯ ಮಾಡುವುದರಲ್ಲಿಯೇ ತಮ್ಮ ಜೀವಮಾನವನ್ನು ಅರ್ಪಿಸುತ್ತ ಬಂದರು. ತಮ್ಮ ಅಭೀಷ್ಟವು ನೆರವೇರುವುದಕ್ಕೆ ಒಂದು ಸಾಧನವೆಂದು ಅವರು ಈ ಮಹಿಳಾ ವಿದ್ಯಾಲಯವನ್ನು ಸ್ಥಾಪಿಸಿ ತಮ್ಮ ತನು, ಧನ, ಪ್ರಾಣಗಳಾದಿ ಸರ್ವಸ್ವವನ್ನೂ ಅದಕ್ಕಾಗಿ ಅರ್ಪಿಸುತ್ತಾ ಬಂದರು.

ಸಹೋಪಾಧ್ಯಾಯಿನಿ ಶ್ರೀಮತಿ ಸಾವಿತ್ರಿ ಎಳೆಯ ಪ್ರಾಯದವಳು. ವಯಸ್ಸು ಸುಮಾರು ಇಪ್ಪತ್ತೈದು ಇರಬಹುದು. ಇನ್ನೂ ಮದುವೆಯಾಗಿರಲಿಲ್ಲ. ಮೂರು ವರ್ಷಗಳ ಮುಂಚೆ ಎಂ. ಎ. ಎಲ್. ಟಿ. ಪರೀಕ್ಷೆ ಪಾಸುಮಾಡಿ ಈ ವಿದ್ಯಾಲಯಕ್ಕೆ ಸಹೋಪಾಧ್ಯಾಯಿನಿಯಾಗಿ ಬಂದವಳು. ಮೊದಲು ಆಕೆ ಬಂದದ್ದು ಸಂಪಾದನೆಗೋಸ್ಕರವಾಗಿಯೆ. ಅನಂತರ ಆಕೆಯ ಮನೋಭಾವನೆಯೇ ಬದಲಾಯಿಸಿತು. ನೋಡಲಿ ಅನ್ನಪೂರ್ಣೆಯ

ಸಹವಾಸದಿಂದ. ಅನ್ನಪೂರ್ಣೆಯ ಹಾಗೆ ತಾನೂ ಸ್ತ್ರೀ ಜಾತಿಯ ಉದ್ಧಾರ ಕ್ಕೋಸ್ಕರ ಜೀವನವನ್ನೇ ತಕ್ಕೆ ಅರ್ಪಿಸಬಾರದೆಂದು ಹಲವು ಸಾರೆ ಅವಳಿ ಗನ್ನಿಸುವುದುಂಟು.

ಸಿಮೆಂಟು ಬೆಂಚಿನ ಮೇಲೆ ಕುಳಿತುಕೊಂಡನಂತರ ಸಾವಿತ್ರಿಯು 'ಅಮ್ಮಾ, ಈ ದಿನ ಪದ್ಯಪಾಠವನ್ನು ಹೇಳಿಕೊಡುವಾಗ ನನಗೆ ಬಹಳ ಕಷ್ಟವಾಗಿಹೋಯಿತು. 'ಪ್ರೇಮದಿಂದಲೇ ಪ್ರಪಂಚವು ನಡೆಯುವುದು' ಎಂಬುದಾಗಿ ಅದರಲ್ಲಿ ಒಂದು ಸಾಲು ಇದೆ. ಎಂಥ ಪ್ರೇಮವನ್ನು ಕುರಿತು ಹೇಳುತ್ತಾರೆ ಕವಿಗಳು ಎಂದು ಪದ್ಮ ಕೇಳಿದಳು. ಬಹಳ ಕೆಟ್ಟ ಹುಡುಗಿ ಪದ್ಮ! ಅದೊ ಅವಳು ನಗುವ ಶಬ್ದವನ್ನು ಕೇಳಿರಿ' ಎಂದಳು.

ತೋಟದ ಮತ್ತೊಂದುಕಡೆ ಕೆಲವು ಹುಡುಗಿಯರು ಚೆಂಡಾಟ ವನ್ನು ಆಡುತ್ತಿದ್ದರು. ಅಲ್ಲಿಂದ ಹೊರಟು ಕಲಕಲವೆಂಬ ನಗುವಿನ ಶಬ್ದ ಗಾಳಿಯಲ್ಲಿ ತೇಲಿಕೊಂಡು ಬರುತ್ತಿತ್ತು.

'ಪದ್ಮಳ ಪ್ರಶ್ನೆಗೆ ನೀವೇನು ಉತ್ತರ ಹೇಳಿದಿರಿ?' ಎಂದು ಅನ್ನಪೂರ್ಣೆ ಕೇಳಿದರು.

'ಉತ್ತರ ಹೇಳಲು ನನಗೆ ಬಹಳ ಪೇಚಾಟವಾಯಿತು. ಕವಿಯು ಇಲ್ಲಿ ಪ್ರೇಮವೆಂದು ಹೇಳುವಾಗ ಪ್ರಣಯಿಗಳ ಪ್ರೇಮವನ್ನೇ ಕುರಿತು ಹೇಳಿದ್ದಾನೆ. ಅದನ್ನು ಆ ಹುಡುಗಿಯರಿಗೆ ಹೇಗೆ ತಾನೇ ತಿಳಿಸಲಿ. ಸಾಧಾರಣವಾಗಿ ಅದನ್ನು ಪಾಠ ಹೇಳುವುದೇ ಕಷ್ಟ. ನಾನು 'ಕ್ವೀನ್ ಮೇರಿಸ' ಕಾಲೇಜಿನಲ್ಲಿ ಓದುತ್ತಿದ್ದಾಗ ನಮ್ಮ ಉಪಾಧ್ಯಾಯರು ಪಟ್ಟ ಪಾಡು ನನಗೆ ಚೆನ್ನಾಗಿ ಜ್ಞಾಪಕವಿದೆ. ಇಲ್ಲೋ ಬಾಲವಿಧವೆಯರು, ಗಂಡನಿಂದ ತ್ಯಜಿಸಲ್ಪಟ್ಟವರು-ಇಂಥವರ ಎದುರಿನಲ್ಲಿ ಪ್ರೇಮದ ವಿಷಯ ವಾಗಿ ಹೇಗೆ ತಾನೇ ಮಾತನಾಡುವುದು? ......'

ಹೀಗೆ ಹೇಳುತ್ತಿದ್ದ ಸಾವಿತ್ರಿ ತಟ್ಟನೆ ಮಾತು ನಿಲ್ಲಿಸಿದಳು. ಸೋದರಿ ಅನ್ನಪೂರ್ಣೆಯವರು ಬಾಲ್ಯದಲ್ಲಿಯೇ ಗಂಡನನ್ನು ಕಳೆದುಕೊಂಡವರು ಎಂಬುದು ಸಾವಿತ್ರಿಗೆ ಆ ಸಮಯದಲ್ಲಿ ನೆನಪಾಗಿ ತಾನು ವಿರಸವಾಗಿ ಮಾತನಾಡಿದ ಹಾಗೆ ಅವಳಿಗೆ ಭಯವುಂಟಾಯಿತು. ಆ ತಪ್ಪನ್ನು

ಮರೆಸುವುದಕ್ಕೋಸ್ಕರ ಅವಳು ಪುನಃ 'ಅಮ್ಮಾ, ನಿಜವಾಗಿ ನೋಡಿದರೆ ಇದೆಲ್ಲ ಹುಚ್ಚುತನವೇ ಎಂದು ನನಗೆ ಅನಿಸುತ್ತದೆ. ಪ್ರೇಮ–ಗೀಮ ವೆಂದು ಹೇಳುವುದೆಲ್ಲ ಕೇವಲ ಭ್ರಮೆಯೇ ಅಲ್ಲವೆ? ಕೆಲಸವಿಲ್ಲದ ಕವಿಗಳ ಸುಳ್ಳು ಮನೋರಾಜ್ಯವೇ ಹೊರತು ಅದು ಮತ್ತೇನೂ ಅಲ್ಲ' ಎಂದು ಹೇಳಿದಳು.

ಆಗ ಅನ್ನಪೂರ್ಣೆ 'ಹಾಗೇನು ಸಮಾಚಾರ? ಎಲ್ಲವೂ ಭ್ರಮೆಯೆ? ತುಂಬಾ ಸರಿ, ಹೀಗೆಯೇ ಡಾ. ಶ್ರೀನಿವಾಸನಿಗೆ ನಾನು ಕಾಗದವನ್ನು ಬರೆಯುವೆನು' ಎಂದರು.

ಸಾವಿತ್ರಿಯು ಡಾ. ಶ್ರೀನಿವಾಸನನ್ನು ಮದುವೆಯಾಗಲಿರುವಳೆಂಬ ಮಾತು ನಡೆದಿತ್ತು. ಅದರಿಂದಲೇ ಅನ್ನಪೂರ್ಣೆ ಹಾಗೆ ಅಂದದ್ದು. ಸಾವಿತ್ರಿಯು ವ್ಯಂಗ್ಯವಾಗಿ ನಕ್ಕು 'ಹೌದು, ಹೌದು, ಯಾರು ಕಂಡರು? ಈಗ ಎಲ್ಲ ನಿಜವಾಗಿರುತ್ತೆ. ಎರಡು ವರ್ಷ ಕಳೆದ ಮೇಲೆ ಹೇಗಿರು ತ್ತದೆಯೊ ಯಾರಿಗೆ ಗೊತ್ತು?......ಅದು ಹೋಗಲಿ, ಅಮ್ಮಾ, ಪ್ರಪಂಚದಲ್ಲಿ ಉನ್ನತ ಕಾರ್ಯಗಳೆಲ್ಲವೂ ಪ್ರೇಮದಿಂದಲೇ ನಡೆಯು ವುದು' ಎಂದು ಈ ಕವಿಯು ಹೇಳುವುದು ಅಸತ್ಯವಲ್ಲವೆ? ಅದು ಹೇಗೆ ತಾನೆ ಸರಿ? ಇಪ್ಪತ್ತೈದು ವರ್ಷಗಳಿಂದ ನಡೆಯುತ್ತಿರುವ ಈ ಮಹಿಳಾ ವಿದ್ಯಾಲಯವನ್ನೇ ತೆಗೆದುಕೊಳ್ಳೋಣ. ಕನ್ಯಾಕುಮಾರಿಯಿಂದ ಹಿಡಿದು ಹಿಮಾಲಯದ ವರೆಗೆ ನೋಡಿದರೂ ಇದನ್ನು ಹೊಗಳದವರೇ ಇಲ್ಲ. ಈ ಸೇವಾಲಯದ ವಿಷಯದಲ್ಲಿ ಕವಿಯು ಹೇಳುವುದು ಹೇಗೆ ಸರಿಹೋಗು ತ್ತದೆ?' ಎಂದಳು.

'ಸಾವಿತ್ರಿ! ಪ್ರಪಂಚದಲ್ಲಿ ನಡೆಯುವ ಇತರ ಉನ್ನತ ಕಾರ್ಯ ಗಳ ವಿಚಾರ ನನಗೆ ಗೊತ್ತಿಲ್ಲ. ಕವಿಯು ಹೇಳುವ ಮಾತು ಅವಕ್ಕೆಲ್ಲ ಹೊಂದುವುದೊ ಇಲ್ಲವೊ ನನಗೆ ಗೊತ್ತಿಲ್ಲ. ಆದರೆ ನನ್ನ ಸೇವೆಯನ್ನು ಒಂದು ದೊಡ್ಡ ಕಾರ್ಯವನ್ನಾಗಿ ಹೇಳುವ ಪಕ್ಷದಲ್ಲಿ ಕವಿಯು ಹೇಳು ವುದು ಅದಕ್ಕೆ ಬಹಳ ಚೆನ್ನಾಗಿ ಹೊಂದುತ್ತದೆ. ನನ್ನ ಈ ಹವ್ಯಾಸಕ್ಕೆಲ್ಲ ಮೂಲ ಕಾರಣ ಪ್ರೇಮವೆ......'

'ಇಲ್ಲವೆಂದು ಯಾರು ಹೇಳಿದರು? ಅನಾಥೆಯರು ದೀನರು ಇವರ ಬಗ್ಗೆ ತಮಗಿರುವ ಪ್ರೇಮವು ಪ್ರಸಿದ್ಧವಾದುದಲ್ಲವೆ?'

'ಆ ಪ್ರೇಮವನ್ನು ಕುರಿತು ಹೇಳಲಿಲ್ಲ ನಾನು. ಕವಿಯು ವರ್ಣಿಸಿರುವ ಪ್ರೇಮವನ್ನೇ ಹೇಳಿದೆ. ನಾನು ಏನಾದರೂ ಸ್ವಲ್ಪ ಸೇವೆ ಮಾಡಿದ್ದರೆ ಅದು ಎಲ್ಲಾ ಪ್ರೇಮವೆಂಬ ಬೀಜದಿಂದ ಹುಟ್ಟಿ ಬೆಳೆದುದೆ.'

ಇದನ್ನು ಕೇಳಿ ಸಾವಿತ್ರಿಗೆ ಬಹಳ ಆಶ್ಚರ್ಯವಾಯಿತು. 'ಅಮ್ಮಾ! ಇದು ನಿಜವೇನು? ಅಯ್ಯೋ, ನನಗೆ ಎಲ್ಲಾ ತಿಳಿಸಿರಿ' ಎಂದು ಕಾತರಳಾಗಿ ಸಾವಿತ್ರಿಯು ಕೇಳಿದಳು.

೨

ಅನ್ನಪೂರ್ಣೆಯು ಹೇಳಿದರು :–

ಅದೋ, ಆ ಮದುವೆ ಮನೆಯಿಂದ ನಾಗಸ್ವರದ ಶಬ್ದವು ಗಾಳಿಯಲ್ಲಿ ತೇಲಿಕೊಂಡು ಬರುವುದನ್ನು ನೀನು ಕೇಳುತ್ತಿಲ್ಲವೆ? ನಿನ್ನನ್ನು ನೋಡುವುದಕ್ಕೆ ಬಂದು ನಿಮಿಷ ಮೊದಲು ಅದು ನನ್ನ ಕಿವಿಯಲ್ಲಿ ಬಿದ್ದಾಗ ಹಲವು ಹಳೆಯ ನೆನಪುಗಳು ನನಗೆ ಬಂದವು. ಎಂದೂ ಇಲ್ಲದ್ದು ಈ ದಿನ ಕಣ್ಣೀರು ಸಹ ಬಂದುಬಿಟ್ಟಿತು. ಕೆಲವು ವರ್ಷಗಳ ಹಿಂದೆ ಇದೇ ನಾಗಸ್ವರವನ್ನು 'ಸಂಪನ್ನಾರ್ ಕೋವಿಲಿ'ನ ರಾಮಸ್ವಾಮಿಯು ಬಾರಿಸಿದನು. ಆ ಕಾಲದಲ್ಲಿ ನಾಗಸ್ವರ ಬಾರಿಸುವುದರಲ್ಲಿ ಅವನೇ ಹೆಸರುವಾಸಿಯಾಗಿದ್ದವನು.

'ಅದೆಲ್ಲಾ ನಿಮಗೆ ಇನ್ನೂ ಜ್ಞಾಪಕವಿದೆಯೇನಮ್ಮ! ಬಹಳ ಚಿಕ್ಕಂದಿನಲ್ಲೇ ನಿಮಗೆ ವಿವಾಹವಾಯಿತೆಂದು ನಾನು ಕೇಳಿಬಲ್ಲೆ.'

'ನನ್ನ ವಿವಾಹವನ್ನು ಕುರಿತು ನಾನು ಹೇಳಲಿಲ್ಲ. ಆರು ವರ್ಷ ವಯಸ್ಸಾಗಿದ್ದಾಗ ನನಗೆ ಮದುವೆ ಮಾಡಿದರಂತೆ. ಒಂಭತ್ತನೆಯ ವಯಸ್ಸಿನಲ್ಲಿಯೇ ನಾನು ವಿಧವೆಯಾದೆ. ಅದೆಲ್ಲ ನನಗೆ ಕನಸಿನ ಹಾಗೆ ಸಹ ಜ್ಞಾಪಕವಿಲ್ಲ. ಅಷ್ಟು ಎಳೆಯ ಪ್ರಾಯದಲ್ಲಿ ವಿಧವೆಯಾದುದರಲ್ಲಿಯೂ ಒಂದು ಸೌಕರ್ಯವಿತ್ತು. ಏನು, ನೀನು ನಗುತ್ತೀಯಲ್ಲ!

ನಿಜವಾಗಿಯೂ ಅದು ಹಾಗೆಯೆ. ನಾಲ್ಕೈದು ವರ್ಷ ಕಳೆದು ಹಾಗೆ ಆಗಿದ್ದರೆ ಎಲ್ಲರ ಹಾಗೆ ನನ್ನನ್ನೂ ವಿರೂಪಮಾಡಿಬಿಡುತ್ತಿದ್ದರು. ಬಹಳ ಚಿಕ್ಕ ವಯಸ್ಸಾದುದರಿಂದ ಏನೂ ಮಾಡದೆ ಹಾಗೆಯೇ ಬಿಟ್ಟರು.'

ಅನ್ನಪೂರ್ಣೆ ಸ್ವಲ್ಪ ಹೊತ್ತು ಚಿಂತೆಯಲ್ಲಿ ಮುಳುಗಿದ ಹಾಗೆ ಸುಮ್ಮನಿದ್ದು ಪುನಃ ಕಥೆಯನ್ನು ಮುಂದುವರಿಸಿದರು.

ನಾನು ಹೇಳುವುದು ನಮ್ಮ ಚಿಕ್ಕಮ್ಮನ ಮಗಳ ಮದುವೆಯ ವಿಷಯ. ಅಂಬುಜ ನನಗಿಂತ ಎರಡು ವರ್ಷ ಚಿಕ್ಕವಳು. ಅವಳಿಗೆ ಮದುವೆಯಾದಾಗ ನನಗೆ ಹದಿನಾರು ವಯಸ್ಸಿರಬಹುದು. ಅಂಬುಜಳಿಗೆ ನನ್ನಲ್ಲಿ ಬಹಳ ಪ್ರೀತಿ. ನಾನು ವಿಧವೆಯಾದಾಗಿನಿಂದ ಅವರ ಮನೆಯಲ್ಲಿಯೆ ಇರುತ್ತಿದ್ದೆ. ನನ್ನ ದೌರ್ಭಾಗ್ಯವನ್ನು ಎಣಿಸಿ ಆ ಮನೆಯಲ್ಲಿ ಎಲ್ಲರೂ ನನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಆ ಮನೆಯಲ್ಲಿ ಎಲ್ಲವೂ ನಾನು ಹೇಳಿದ ಹಾಗೆ ನಡೆಯುತ್ತಿತ್ತು.

ಅಂಬುಜಳಿಗೆ ಮದುವೆ ನಿಶ್ಚಯವಾದಾಗ ನನ್ನ ಇಷ್ಟದ ಪ್ರಕಾರ ಎಲ್ಲಾ ಏರ್ಪಾಡುಗಳೂ ನಡೆದುವು. ಅಳಿಯನಿಗೆ ಯಾವ ಯಾವ ಬಟ್ಟೆಯನ್ನು ತೆಗೆಯುವುದು, ಮೇಳಕ್ಕೆ ಯಾರಿಗೆ ಹೇಳುವುದು, ನಾಲ್ಕನೆಯ ದಿನ ಔತಣಕ್ಕೆ ಯಾವ ಯಾವ ಭಕ್ಷ್ಯವನ್ನು ಮಾಡುವುದು ಇವೇ ಮೊದಲಾದ ಎಲ್ಲವನ್ನೂ ನಾನೇ ತೀರ್ಮಾನಿಸಿದೆ.

ಮದುವೆಗೆ ಮೊದಲನೆಯ ದಿನ ಅಳಿಯನನ್ನು ಕರೆತಂದಮೇಲೆ ನಿಶ್ಚಿತಾರ್ಥವು ನಡೆಯಿತು. ಹೆಣ್ಣಿನ ಕಡೆಯ ಹೆಂಗಸರೊಂದಿಗೆ ನಾನು ಅಂಗಳದಲ್ಲಿ ನಿಂತುಕೊಂಡಿದ್ದೆ. ಹಸೆಯಲ್ಲಿ ಕುಳಿತಿದ್ದ ಅಂಬುಜಳ ತಲೆಯಿಂದ ಹರಳು ಕೆತ್ತಿದ ಜಡೆಬಿಲ್ಲೆಯು ಬಿದ್ದುಹೋಗುವಹಾಗಿತ್ತು. ನಾನು ಅವಳ ಹತ್ತಿರ ಹೋಗಿ ಅದನ್ನು ಸರಿಯಾಗಿ ತಿರುಗಿಸಿದೆ. ಹಾಗೆ ಅದನ್ನು ತಿರುಗಿಸಿ ಬಿಟ್ಟು ತಲೆಯನ್ನು ಎತ್ತಿ ನೋಡಿದಾಗ ಅಳಿಯನ ಪಕ್ಕದಲ್ಲಿ ಕುಳಿತಿದ್ದ ಒಬ್ಬ ಯುವಕನು ನನ್ನನ್ನೇ ದೃಷ್ಟಿಸಿ ನೋಡುತ್ತಿರುವುದನ್ನು ಕಂಡೆ. ಆ ಕ್ಷಣದಲ್ಲಿ ನನ್ನ ದೇಹವಾದ್ಯಂತವೂ ನಡುಗಿತು. ತಲೆ ಸುತ್ತುವ

ಹಾಗಾಯಿತು. ಪ್ರಜ್ಞೆ ತಪ್ಪಿ ಎಲ್ಲಿ ಕೆಳಕ್ಕೆ ಬೀಳುವೆನೊ ಎಂಬುದಾಗಿ ನನಗೆ ಭಯವಾಯಿತು. ದೇವರ ಕೃಪೆಯಿಂದ ಹಾಗೆ ಏನೂ ಆಗಲಿಲ್ಲ.

ಅವರ ಮುಖವನ್ನು ಮತ್ತೊಮ್ಮೆ ನೋಡಬೇಕೆಂಬ ಆಸೆಯು ನನ್ನ ಮನಸ್ಸಿನಲ್ಲಿ ಉಕ್ಕಿ ಬಂತು. ಆ ಬಗೆಯಾಗಿ ಒಂದು ಆಸೆಯಿರುತ್ತದೆಂಬುದನ್ನು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ. ಮನಸ್ಸನ್ನು ಎಷ್ಟೋ ತಡೆದು ನೋಡಿದೆ. ಹಲ್ಲನ್ನು ಗಟ್ಟಿಯಾಗಿ ಕಚ್ಚಿಕೊಂಡು ನೋಡಿದೆ. ಯಾವುದೂ ಸಾಧ್ಯವಾಗಲಿಲ್ಲ. ಕೊನೆಗೆ ಅವರು ಕುಳಿತಿದ್ದ ಕಡೆ ತಿರುಗಿ ನೋಡಿದಾಗ, ಅವರು ಆಗ ತಾನೇ ನನ್ನನ್ನು ನೋಡುತ್ತಲಿದ್ದ ಮುಖವನ್ನು ಬೇರೆ ಕಡೆಗೆ ತಿರುಗಿಸುವುದನ್ನು ಕಂಡೆನು.

ಆ ದಿನ ರಾತ್ರಿ ನನಗೆ ನಿದ್ರೆ ಬರಲಿಲ್ಲ.

ಮರುದಿನ ಅಂಬುಜಳ ಮದುವೆ ಬಹಳ ವೈಭವದಿಂದ ನೆರವೇರಿತು. ಹೊರಗಡೆಯ ಕೆಲಸಗಳನ್ನು ನಾನು ಮೊದಲಿನ ಹಾಗೆ ಗಮನಿಸುತ್ತಿದ್ದೆ. ಆದರೆ ನನ್ನ ಮನಸ್ಸು ಬೇರೆ ಯಾವುದೊ ಒಂದು ರಾಜ್ಯದಲ್ಲಿ ಸಂಚರಿಸ ತೊಡಗಿತು.

ಅಲ್ಪಸ್ವಲ್ಪ ಉಳಿದಿದ್ದ ಸಂದೇಹವು ಮದುವೆಯ ದಿನ ತೀರಿ ಹೋಯಿತು. ಅವರು ನನ್ನನ್ನು ನೋಡಿದ್ದು ಹಾಗೆಯೇ ಯೋಗಾಯೋಗದಿಂದ ಅಲ್ಲ. ಬೇಕು ಎಂದೇ ಇಷ್ಟವಾಗಿಯೇ ನೋಡಿದರು. ನನ್ನ ಮನಸ್ಸು ಆಗ ಸ್ವಲ್ಪ ತಣ್ಣಗಾಯಿತು. ಯಾವುದೋ ಒಂದು ಶಕ್ತಿಯು ನನ್ನನ್ನು ಅವರ ಕಡೆಗೆ ಎಳೆಯುತ್ತಿದೆಯೆಂಬುದಾಗಿ ನಾನು ತಿಳಿದೆ. . . .

'ಅದೋ, ಪೂರ್ಣ ಚಂದ್ರನು ಉದಯಿಸುತ್ತಿದ್ದಾನೆ, ನೋಡಿದೆಯಾ?' ಎಂದು ಅನ್ನಪೂರ್ಣೆಯು ಹೇಳಲು ಸಾವಿತ್ರಿಯು ಆ ಕಡೆಗೆ ತಿರುಗಿ ನೋಡಿದಳು.

'ಪೂರ್ಣ ಚಂದ್ರನನ್ನು ಇದಕ್ಕೆ ಮೊದಲು ನಾನು ಎಷ್ಟೋಸಲ ನೋಡಿದ್ದೇನೆ. ಆದರೆ ಅಂಬುಜಳ ಮದುವೆಯ ರಾತ್ರಿ ಪೂರ್ಣಚಂದ್ರನಲ್ಲಿ ನಾನು ಕಂಡ ಸೊಬಗನ್ನು ಅದಕ್ಕೆ ಮುಂಚೆ ಎಂದೂ ನೋಡಿರಲಿಲ್ಲ. ನಾಗಸ್ವರದ ಮಧುರನಾದವು ಆ ಮುಂಚೆ ನನ್ನನ್ನು ಆ ಬಗೆಯಾಗಿ

ಪರವಶಳಾಗಿ ಮಾಡಿರಲಿಲ್ಲ. ಗಂಧದ ಸುವಾಸನೆಯೂ ಮಲ್ಲಿಗೆ ಹೂವಿನ ಘಮಘಮವೂ ಅದಕ್ಕೆ ಮೊದಲು ನನಗೆ ಅಷ್ಟು ಆನಂದವನ್ನು ಎಂದೂ ಕೊಟ್ಟಿರಲಿಲ್ಲ.

ನನ್ನ ಹೃದಯದಲ್ಲಿ ಎಂದೂ ತೋರದ ಆಶೆಗಳು ಅಂದು ತಲೆದೋರಿದವು. 'ಎಲ್ಲಾ ಹುಡುಗಿಯರಹಾಗೆ ನಾನೂ ಏತಕ್ಕೆ ತಲೆ ಬಾಚಿಕೊಂಡು ಹೂ ಮುಡಿದುಕೊಳ್ಳಕೂಡದು? ಏತಕ್ಕೆ ಕುಂಕುಮವನ್ನು ಹಚ್ಚಿಕೊಳ್ಳಕೂಡದು? ಏತಕ್ಕೆ ಸುಗಂಧದ್ರವ್ಯಗಳನ್ನು ಮುಟ್ಟಬಾರದು?' ಎಂಬುದಾಗಿ ಯೋಚನೆಗಳು ಬಂದವು..

ಮದುವೆಯಾದ ಮೂರನೆ ದಿವಸ ಮಧ್ಯಾಹ್ನ ಅಂಬುಜಗಳನ್ನು ಕರೆದುಕೊಂಡು ನಾನು ಬೀಗರ ಮನೆಗೆ ಹೋದೆ. ಅಂಬುಜಳಿಗೆ ಅವಳ ನಾದಿನಿ ತಲೆ ಬಾಚಿ ಜಡೆ ಹಾಕುತ್ತಿದ್ದಳು. ಅಂಬುಜಳನ್ನು ಅವಳ ನಾದಿನಿ ಈಗ ಯಾವ ಯಾವ ಒಡವೆ ಇದೆ, ಇನ್ನೂ ಏನೇನು ಒಡವೆಗಳನ್ನು ಮಾಡಿಸಿಕೊಡುತ್ತಾರೆ ಇದೇ ಮುಂತಾದ ಮುದ್ದಿನ ಪ್ರಶ್ನೆಗಳನ್ನು ಕೇಳುತ್ತಿದ್ದಳು. ಆ ಮಾತುಗಳಕಡೆಗೆ ನನ್ನ ಗಮನವು ಹೋಗಲಿಲ್ಲ. ಪಕ್ಕದ ಕೋಣೆಯಲ್ಲಿ ಯಾರೋ ಮಾತನಾಡಿಕೊಳ್ಳುತ್ತಿದ್ದುದು ಅಲ್ಲಿ ಇಲ್ಲಿ ಒಂದೊಂದು ಮಾತು ಕಿವಿಯಲ್ಲಿ ಬಿತ್ತು. ಅವರ ಧ್ವನಿಯಹಾಗೆ ಕಂಡುಬಂದಮೇಲೆ ನಾನು ಚೆನ್ನಾಗಿ ಗಮನಿಸಿ ಕೇಳತೊಡಗಿದೆ. ಆ ಧ್ವನಿಯಲ್ಲಿ ಎಷ್ಟು ಮಾಧುರ್ಯ! ಎಷ್ಟು ಪರಿತಾಪ! ಬಾಲ್ಯದಲ್ಲಿಯೇ ವಿಧವೆಯರಾದ ಹುಡುಗಿಯರ ಪಾಡನ್ನು ಕುರಿತು ಅವರು ಮಾತನಾಡುತ್ತಿದ್ದರು. ಅವರ ಕಷ್ಟಗಳನ್ನು ಕುರಿತು ಯಾರುಯಾರೊ ಮಹಾತ್ಮರು ಹೇಳಿರುವ ವಾಕ್ಯಗಳನ್ನು ಎತ್ತಿ ತೋರಿಸಿದರು. ಕೆಲವು ಪುಸ್ತಕಗಳ ಹೆಸರನ್ನು ಸಹ ಹೇಳಿದರು. ಅವುಗಳಲ್ಲಿ ಮಾಧವಯ್ಯ ರಚಿಸಿರುವ 'ಮುತ್ತು ಮೀನಾಕ್ಷಿ' ಕಥೆಯನ್ನು ಓದಿರಿ ಎಂದು ಅವರು ಹೇಳಿದುದು ಮಾತ್ರ ನನಗೆ ಇನ್ನೂ ಚೆನ್ನಾಗಿ ಜ್ಞಾಪಕವಿದೆ. 'ಸರಿಯಾಯಿತಪ್ಪ, ಪ್ರಸಾದವಾಗಿ ಮಾತನಾಡುತ್ತೀಯೆ. ಹಾಗಾದರೆ ನೀನು ಅನ್ನಪೂರ್ಣೆಯನ್ನು ಮದುವೆ ಮಾಡಿಕೊ' ಎಂದು ಒಬ್ಬನು ಹೇಳಿದನು. ಅದಕ್ಕೆ ಇವರು

'ಛೀ, ಛೆ, ನೀವು ಶುದ್ಧ ಮುಟ್ಠಾಳರು! ನಿಮ್ಮ ಹತ್ತಿರ ಮಾತನಾಡುವು ದಕ್ಕಿಂತ ಆ ಗೋಡೆಗಳನ್ನು ಮಾತಾಡಿಸುವುದು ಒಳ್ಳೆಯದು' ಎಂದು ಉತ್ತರ ಕೊಟ್ಟರು. ಒಡನೆಯೇ ಆ ಕೋಣೆಯಿಂದ ಯಾರೋ ಒಬ್ಬರು ಎದ್ದುಹೋದ ಶಬ್ದ ಕೇಳಿಸಿತು. ಅದು ಅವರೇ ಇರಬಹುದು.

ಹೀಗೆ ಎರಡುಮೂರು ದಿನಗಳಲ್ಲಿ ಅವರ ವಿಷಯದ ವಿವರಗಳ ನ್ನೆಲ್ಲಾ ಬೀಗರ ಕಡೆಯ ಮಾತುಗಳಿಂದ ತಿಳಿದುಕೊಂಡೆ. ಆ ವರ್ಷ ಅವರು ಬಿ. ಎ. ಪರೀಕ್ಷೆಯಲ್ಲಿ ಮದರಾಸುಪ್ರಾಂತಕ್ಕೆಲ್ಲ ಮೊದಲನೆಯವರಾಗಿ ತೇರ್ಗಡೆ ಹೊಂದಿದ್ದರಂತೆ. ಐದುಸಾವಿರ ರೂಪಾಯಿಗಳ ವರದಕ್ಷಿಣೆ ಯೊಡನೆ ಅನೇಕ ವಧುಗಳು ಅವರಿಗೆ ಬರುತ್ತಿದ್ದವೆಂದು ಜನರು ಮಾತ ನಾಡಿಕೊಳ್ಳುತ್ತಿದ್ದರು. ಅಂಥವರ ಪ್ರೀತಿಗೆ ನಾನು ಪಾತ್ರಳಾದೆ. ನನ್ನ ಭಾಗ್ಯವನ್ನು ನಾನೇ ನಂಬಲಾಗಲಿಲ್ಲ.

ಳ

ಮದುವೆಯ ನಾಲ್ಕನೆಯ ದಿನ ಬೀಗಿತ್ತಿಗೆ ಮೈ ಸರಿಯಾಗಿಲ್ಲವೆಂಬ ಸಮಾಚಾರ ಬಂತು. ನಾನು ನೋಡಿಕೊಂಡು ಬರುವೆನೆಂದು ಹೇಳಿ ಬೀಗರ ಮನೆಗೆ ಹೋದೆ. ಅಲ್ಲಿ ಇವರು ಒಂದು ವೇಳೆ ಇರುವರೋ ಎಂದು ಯೋಚಿಸಿಕೊಂಡೇ ಹೋದೆ. ಹೊರಬಾಗಿಲನ್ನು ದಾಟುತ್ತಲೇ ಒಳಗೆ ಅಂಗಳದಲ್ಲಿ ತಿರುಗಾಡುತ್ತಿದ್ದ ಅವರು ನನ್ನನ್ನು ನೋಡಿ 'ಯಾರು ಬೇಕು?' ಎಂದು ಕೇಳುತ್ತ ಹತ್ತಿರ ಬಂದರು. ನನಗೆ ಉತ್ತರ ಹೇಳಲು ಏನೂ ತೋಚದೆ ಭ್ರಮೆಗೊಂಡು ನಿಂತುಕೊಂಡೆ. ಅಷ್ಟರಲ್ಲಿ ಬೇಗನೆ ಅವರು ನನ್ನ ಕೈಯಲ್ಲಿ ಒಂದು ಕಾಗದವನ್ನು ಇಟ್ಟು ಅದು ಹೊರಗೆ ಕಾಣದ ಹಾಗೆ ನನ್ನ ಬೆರಳುಗಳಿಂದ ಮುಚ್ಚಿದರು. ತತ್‌ಕ್ಷಣ ಅಲ್ಲಿಂದ ಹೊರಟುಹೋದರು.

ಬಿರುಗಾಳಿಯಿಂದ ಮರದೆಲೆಗಳು ಅಲ್ಲಾಡುವ ಹಾಗೆ ನನ್ನ ದೇಹವು ನಡುಗಿತು. ಆ ಕಾಗದವನ್ನು ನನ್ನ ಎದೆಯಲ್ಲಿ ಜೋಪಾನವಾಗಿ ಇಟ್ಟು ಕೊಂಡು ಒಳಗೆ ಹೋದೆ. ಬೀಗರ ಹತ್ತಿರ ಮಾತನಾಡುತ್ತಿರುವಾಗ

# ಹಾಲಿನವನು

**ಶ್ರೀಮಾನ್ ಎಸ್. ವಿ. ವಿ.** ಯವರ ಪೂರ್ಣ ನಾಮಧೇಯ **ಎಸ್. ವಿ. ವೀರರಾಘವಾಚಾರ್ಯರೆಂದು.** ಇಂಗ್ಲಿಷಿನಲ್ಲಿ ಒಳ್ಳೆಯ ಹೆಸರುವಾಸಿಯಾದ ಬರಹಗಾರರು ಇವರು. "ಸೋಪ್ ಬಬಲ್ಸ್" ಮುಂತಾದ ಇವರ ಮೂರು ನಾಲ್ಕು ಪುಸ್ತಕಗಳು ಇಂಗ್ಲೀಷಿನಲ್ಲಿ ಪ್ರಕಾಶಿತವಾಗಿವೆ. ಇತ್ತೀಚೆಗೆ ನಾಲ್ಕೈದು ವರ್ಷಗಳಿಂದ ಇವರು ತಮ್ಮ ಮಾತೃಭಾಷೆಯಲ್ಲಿ ಬರೆಯುವುದನ್ನು ಪ್ರಾರಂಭಿಸಿದ್ದಾರೆ. ಇಂಗ್ಲೀಷಿಗಿಂತ ಒಂದು ಪಾಲು ಹೆಚ್ಚು ಚೆನ್ನಾಗಿದೆ ಇವರ ಮಾತೃಭಾಷೆಯಲ್ಲಿನ ಲೇಖನಿಯ ವೈಖರಿ.

ಇವರು ವ್ಯಂಗ್ಯ ಮತ್ತು ಹಾಸ್ಯಪೂರ್ಣವಾದ ಅನೇಕ ಕಥೆಗಳನ್ನು ಬರೆದಿದ್ದಾರೆ. ಕಥೆಗಳೆನ್ನುವುದಕ್ಕಿಂತ ಅವುಗಳನ್ನು 'ಸ್ಕೆಚ್' ಅನ್ನುವುದು ಸರಿ. ಭಾಷೆಯಲ್ಲಿ ಮನೆಮಾತುಗಳೇ ಹೆಚ್ಚು. ಆದುದರಿಂದ ಅವರ ಬರವಣಿಗೆಯು ಸರಳವೂ ಆಕರ್ಷಕವೂ ಆಗಿದೆ. ಈ ಸಂಗ್ರಹದ ಕಥೆಯಲ್ಲಿ ಇವರು ಹಾಲಿನವನ ಹೆಸರು ಹೇಳಿ ಕಾಫಿಯ ಸಮಾರಾಧನೆ ನಡೆಸಿದ್ದಾರೆ. ಇದೇ ಅವರ ಲೇಖನಕೌಶಲದ ರಹಸ್ಯ.

ಎಂಟು ನಾಯಿಗಳು, ಒಂಭತ್ತು ತೋಳಗಳು, ಇಪ್ಪತ್ತೈದು ನರಿಗಳು, ಮೂರು ಸಿಂಹಗಳು, ನಾಲ್ಕು ಹುಲಿಗಳು, ಐವತ್ತು ಕೋತಿಗಳು ಎಲ್ಲಾ ಒಟ್ಟಿಗೆ ಸೇರಿ ಪೀಪಲ್ಸ್ ಪಾರ್ಕಿನಲ್ಲಿ ಒಂದೇ ಸಮನೆ ಕೂಗಾಡಲಾರಂಭಿಸಿದರೆ ಹೇಗಿರುವುದೊ ಹಾಗಿತ್ತು ನಮ್ಮ ಮನೆ. ಕಾರಣ ಬೆಳಗ್ಗೆ ಏಳು ಗಂಟೆಯಾದರೂ ಹಾಲಿನವನು ಇನ್ನೂ ಬಂದಿರಲಿಲ್ಲ.

ನಮ್ಮ ಮನೆಯಾಕೆ ಕಾಫಿ ಡಿಕಾಕ್ಷನ್ ಹಾಕಿಟ್ಟುಕೊಂಡು ಮನೆಯಲ್ಲೇ ಒಳಕ್ಕೂ ಹೊರಕ್ಕೂ ಬುಸುಗುಟ್ಟಿಕೊಂಡು ತಿರುಗಾಡುತ್ತಿದ್ದಳು. ಮೋರೆಯಲ್ಲಿ ಎಳ್ಳು ಹುರಿದು ಸಿಡಿಯುತ್ತಿತ್ತು. ಒಂದೂವರೆ ವರ್ಷದ ಮಗು ಸೋನ 'ಅಮ್ಮಾ ಪಾಪಿ ಇ ಈ ಈ ಪಾಪಿ ಹಿ ಹಿ' ಎಂದು ಅತ್ತುಕೊಂಡೇ ತಾಯಿಯ ಹಿಂದೆ ಹೋಗುತ್ತಿತ್ತು. ಸೋನಳಿಗೆ ಇನ್ನೂ 'ಕಾ' ಬಂದಿರಲಿಲ್ಲ. ಆವಳಿಗೆ ಬಂದಿದ್ದುದು ಎರಡು ಮಾತುಗಳು. 'ಅಮ್ಮಾ' ಒಂದು. 'ಪಾಪಿ' ಮತ್ತೊಂದು.

'ಬಾಯಿ ಮುಚ್ಚುವೆಯಾ, ಕತ್ತು ಕಿವಿಚಿ ಬಿಡಲೋ? ಮುಚ್ಚು ಬಾಯಿ, ಮುಚ್ಚುವೆಯೊ ಇಲ್ಲವೊ?' ಎಂದು ಗದರಿಸಿ ನನ್ನ ಕುಟುಂಬವು ಸೋನಳ ಬೆನ್ನಮೇಲೆ ಎರಡು ಏಟುಗಳನ್ನು ಕೊಟ್ಟು ಅವಳನ್ನು ಆ ಕಡೆಗೆ ಎಳೆದು ತಳ್ಳಿಬಿಟ್ಟಳು. ಸೋನಳು ಇನ್ನೂ ಗಟ್ಟಿಯಾಗಿ ಅಳುತ್ತ ತಾಯಿಯ ಹಿಂದೆಯೇ ಹೊರಟಳು.

'ಈ ಹಾಳಾದ ಮಕ್ಕಳು ಇಲ್ಲವೆಂದು ಯಾರು ಅಳುತ್ತಿದ್ದರೊ? ಕೊಂದುಹಾಕಿ ಇವುಗಳನ್ನು' ಎಂದು ನನ್ನ ಕುಟುಂಬ ಸಿಡುಗುಟ್ಟಿದಳು.

ಒಂದು ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು ಬೀದಿಯಲ್ಲಿ ಹೋಗುವ ಹಾಲಿನವರನ್ನೆಲ್ಲ ಕರೆದು 'ಅಯ್ಯಾ, ಕಾಲುಪಡಿ ಹಾಲಿದ್ದರೆ ಕೊಟ್ಟುಹೋಗಿ, ಕಾಸು ಕೊಡುತ್ತೇನೆ' ಎಂದು ಹೇಳುತ್ತಿದ್ದಳು ನಮ್ಮ ಮನೆಯಾಕೆ. ಒಬ್ಬರ ಬಳಿಯಲ್ಲೂ ಹಾಲು ಇರಲಿಲ್ಲ. 'ಏಕೆ, ವರ್ತನೆಯವನು ಬರಲಿಲ್ಲವೇನಮ್ಮ?' ಎಂದು ಹಾಲಿನವರು ಕೇಳುವರು. 'ಅವನು ಹಾಳಾಗಿ ಹೋದ. ಹೊತ್ತು ಎಷ್ಟು ಆಯಿತು! ಇನ್ನೂ ಹಾಳಾದವ ಬರಲಿಲ್ಲ' ಎಂದು ಉತ್ತರ ಹೇಳುವಳು. ನನ್ನ ಹತ್ತಿರ ಬಂದು, ಒಳ್ಳೆ

ಹಾಲಿನವನನ್ನು ಹುಡುಕಿ ಏರ್ಪಡಿಸಿದಿರಿ. ನಿಮಗೆ ಎಂತ ಎಲ್ಲಿ ಸಿಕ್ಕನೊ?' ಎಂದು ಹೇಳಿದಳು. 'ನಿನಗೆಂದೇ ಬೇರೆ ಮತ್ತೊಬ್ಬನನ್ನು ನೋಡಿ ಏರ್ಪಡಿಸಿ ಕೊಳ್ಳುವುದು ತಾನೇ' ಎಂದೆ ನಾನು. ಇನ್ನು ಒಂದೆರಡು ಮಾತು ಹೆಚ್ಚು ನಡೆದಿದ್ದರೆ ಬಲವಾದ ಜಗಳವೊಂದು ನಡೆದುಹೋಗು ವಂತಿತ್ತು.

ಹುಡುಗರ ಮೋರೆಗಳೊಂದೊಂದೂ ಎರಡೆರಡಾಗಿ ಉಬ್ಬಿ ಹೋಗಿತ್ತು. 'ಈ ಹಾಲಿನವನ ದಾರಿಕಾಯುವುದನ್ನು ಬಿಟ್ಟು ಬೇರೆ ಕೆಲಸ ವನ್ನಾದರೂ ನೋಡಬೇಕು' ಎನ್ನುವಳು ಒಬ್ಬ ಹುಡುಗಿ. 'ಅದಕ್ಕೇ ತಾನೆ ನಾವೇ ಒಂದು ಆಕಳನ್ನು ತೆಗೆದು ಕಟ್ಟಿಕೊಳ್ಳಬೇಕು ಎನ್ನುವುದು' ಎನ್ನುವನು ಒಬ್ಬ ಹುಡುಗ. ಹಿರಿಯ ಮಗ ಮಹಡಿಯಿಂದ ಕೆಳಗಿಳಿದು ಬರುತ್ತಾನೆ. ಅವನು ಸಾಧಾರಣವಾಗಿ ಏಳುವುದು ಎಂಟು ಗಂಟೆಗೆ. ಇಂದು ಏಳು ಗಂಟೆಗೇನೇ ಎದ್ದು ಬಂದುಬಿಟ್ಟ. 'ಇನ್ನೂ ಕಾಫಿಗೆ ಹಾಕ ಲಿಲ್ಲವೆ?' ಎಂದ. 'ಹಾಲಿನವನ ದಾರಿ ಕಾಯುತ್ತಿದ್ದೇನೆ. ಆ ಚಂಡಾಲನು ಇನ್ನೂ ಬರಲಿಲ್ಲ' ತಾಯಿ ಹೇಳಿದಳು. 'ಆ ಹಾಲಿನವನನ್ನು ತಪ್ಪಿಕೊಂಡು ಮುತ್ತು ಕೊಡಹೇಳು ಅಪ್ಪನಿಗೆ. ಎರಡು ತಿಂಗಳ ಹಿಂದೆಯೇ ಅವನನ್ನು ಹೊಡೆದೋಡಿಸಬೇಕಿತ್ತು. ಇವನನ್ನು ಬಿಟ್ಟರೆ ಅಪ್ಪನಿಗೆ ಬೇರೆ ಹಾಲಿ ನವನೇ ಸಿಗುವುದಿಲ್ಲ. ಮೇಲಾಗಿ ಇವನಿಗೆ ಹಣ ಬೇರೆ ಮುಂಗಡವಾಗಿ ಕೊಡಬೇಕು' ಎಂದ ಅವನು. 'ಏನೋ, ನಿಮಗೆಲ್ಲ ವಯಸ್ಸಾಗಲಿಲ್ಲವೆ? ಅವನವನಿಗೆ ಬೇಕಾದ ಹಾಲಿನವನನ್ನು ಏರ್ಪಡಿಸಿಕೊಳ್ಳುವುದು ತಾನೆ? ಈ ಮನೆಯ ಸುದ್ದಿ ನನಗೇತಕ್ಕೆ? ಮಕ್ಕಳಾಯಿತು, ತಾಯಿಯಾಯಿತು. ನೀವೇ ಮನೆಯ ವಿಷಯಗಳನ್ನೆಲ್ಲ ನೋಡಿಕೊಳ್ಳಿ. ನಾನು ಏನು ಮಾಡಿ ದರೂ ತಪ್ಪು. ಅಪ್ಪಾ, ಅಪ್ಪಾ ಎಂದು ನನ್ನನ್ನು ಏತಕ್ಕೆ ಅನ್ನುವುದು' ಎಂದೆ.

ಅಷ್ಟು ಹೊತ್ತಿಗೆ ಹಾಲಿನವನು ಒಂದು ಹಿತ್ತಾಳೆಯ ಕೊಳಗ ದಪ್ಪಲೆ ಮತ್ತು ಒಂದು ಹಿತ್ತಾಳೆ ಪಾವನ್ನು ಹಿಡಿದುಕೊಂಡು ಓಡಿ ಬಂದನು. 'ಅಮ್ಮಾ' ಎಂದು ಕೂಗಿದ. 'ಹಾಲಿನವನು ಬಂದ' ಎಂದು

ಕೂಗು ಹಾಕುತ್ತ ಮನೆಯ ಮಕ್ಕಳುಮರಿಗಳೆಲ್ಲ ಹೊರಕ್ಕೆ ಓಡಿಬಂದರು. ಎಲ್ಲರೂ ಒಂದೇ ಸಲಕ್ಕೆ ಹಾಲಿನವನ ಮೇಲೆ ಬಿದ್ದು ಕೂಗಾಡಲಾರಂಭಿಸಿದರು. 'ಏನಯ್ಯ! ಹೊತ್ತು ಎಷ್ಟಾಯಿತು? ಹೀಗೇನೇ ಹಾಲು ತಂದು ಕೊಡುವುದು' ಎಂದು ಗರ್ಜಿಸಿದಳು ನನ್ನಾಕೆ. 'ಹಾಲಿನವನ ಸೊಗಸನ್ನು ನೋಡಬೇಕು! ಬಂದರೂ ಬಂದ ಒಂಭತ್ತು ಘಂಟೆಗೆ' ಎಂದಳು ಹುಡುಗಿ. 'ಏನಯ್ಯಾ, ಎಲ್ಲರ ಮನೆಯಲ್ಲೂ ಹೀಗೇನೇ ಬರುವುದು ಹಾಲಿನವ' ಎಂದ ಒಬ್ಬ ಹುಡುಗ. 'ಅವನಿಗೆ ಬಿದ್ದು ನಮಸ್ಕಾರ ಮಾಡುವಹಾಗೆ ಹೇಳು' ಎಂದು ಹಿರೇ ಹುಡುಗ ಒಳಗಿನಿಂದಲೇ ಕೂಗಿದ.

'ನೀವೆಲ್ಲರೂ ಒಳಕ್ಕೆ ಹೋಗಿ. ಹೋಗಿ ಅಂದರೆ ಹೊರಡಿರಿ. ಹುಂ' ಎಂದು ನಾನು ಕೂಗುಹಾಕಿದೆ. ಎಲ್ಲರೂ ಒಳಕ್ಕೆ ನಡೆದರು.

ಅನಂತರ ನಾನು ಹಾಲಿನವನ ಕಡೆ ತಿರುಗಿ ಕೀಳ್ದನಿಯಲ್ಲಿ 'ಏನಯ್ಯ ಈಗ ಹೊತ್ತು ಎಷ್ಟಾಯಿತು?' ಎಂದು ಕೇಳಿದೆ. ಹಾಲಿನವನು ಬಗ್ಗಿಸಿದ ತಲೆಯನ್ನು ಮೇಲಕ್ಕೆತ್ತಲಿಲ್ಲ. ನನ್ನ ಕೈಗಳು ನಡುಗುತ್ತಿದ್ದವು. ತುಟಿಯು ಅದರುತ್ತಿತ್ತು. ಒಳಗೊಳಗೆ ಕೋಪವು ಉಕ್ಕುತ್ತಿತ್ತು. ಏನಾದರೊಂದು ಒದಲು ಮಾತು ಹೇಳಿದ್ದರೆ ಒಡನೆಯೇ ಅವನ ತಲೆಯ ಮೇಲೆ ಒಂದು ಬೀಳುತ್ತಿದ್ದುದು ಖಂಡಿತ. ನಾನು ಕೋಪಾವೇಶದಲ್ಲಿರುವೆನೆಂದು ತಿಳಿದು ಹಾಲಿನವನು ಒಂದೂ ಮಾತನಾಡದೆ ತಲೆಯನ್ನು ಬಗ್ಗಿಸಿಕೊಂಡು ನಿಂತಿದ್ದನು.

'ಏನೋ, ಕೇಳಿದ್ದಕ್ಕೆ ಉತ್ತರ ಹೇಳದೆ ನಿಂತಿದ್ದೀ! ಹೊತ್ತು ಎಷ್ಟಾಗಿದೆ?' ಎಂದು ಸ್ವಲ್ಪ ಗಟ್ಟಿಯಾಗಿ ಹೇಳಿದೆ.

'ಇಲ್ಲಾ ಸಾಮಿ....' 'ಇಲ್ಲ ಸಾಮಿ ಯಾವುದು, ಉಂಟು ಸಾಮಿ ಯಾವುದು. ನನಗೊಂದೂ ಬೇಕಿಲ್ಲ. ನಿನ್ನ ಹಾಲು ಬೇಡ, ಹೋಗು. ಬೇರೆ ಹಾಲಿನವನನ್ನು ಏರ್ಪಾಡು ಮಾಡಲು ನನಗೆ ಗೊತ್ತಿದೆ. ಇಷ್ಟು ಚೆನ್ನಾಗಿ ಹಾಲು ತಂದು ಕೊಡುವುದಕ್ಕೆ ನಿನಗೆ ಅಡ್ವಾನ್ಸು ಬೇರೆ. ನಾಚಿಕೆ ಇಲ್ಲದೆ ಬರುತ್ತಾನೆ ಒಂಭತ್ತು ಘಂಟೆಗೆ! ನಿನ್ನ ಹಾಲನ್ನು

ತೆಗೆದುಕೊಂಡು ಹೋಗು. ಹೋಗು ಅಂದರೆ ಹೋಗು. ನಿಲ್ಲಬೇಡ ಇಲ್ಲಿ!'

'ನಾಳೆಯಿಂದ......'

'ನಾಳೆಯಿಂದಲೂ ಇಲ್ಲ, ನಾಡಿದ್ದಿನಿಂದಲೂ ಇಲ್ಲ. ನೀನು ಬೇಕಾಗಿಯೇ ಇಲ್ಲ. ಮೊದಲು ಹೊರಗೆ ಹೊರಡು' ಎಂದೆ. ಹಾಲಿನವನು ನನ್ನನ್ನು ದಾಟಿಕೊಂಡು ಒಳಕ್ಕೆ ಹೋಗಲು ಯತ್ನಿಸಿದನು. 'ಹೋಗಬೇಡ ಒಳಗೆ, ಹೀಗೆ ಬಾ, ಹೊರಡು ಹೊರಗೆ' ಎಂದು ಹೇಳಿ ಬೆನ್ನಿಗೆ ಕೈ ಹಾಕಿ ಹಿಡಿದು ತಳ್ಳಿದೆ. ನಾನು ಏನು ಮಾಡಿದರೂ ಕೊನೆಗೆ ಅವನು ಹಾಲನ್ನು ಕೊಟ್ಟೇ ಹೋದ. ಹಾಲಿನವನಿಗೆ ತಿಳಿಯದೇ, ಯಾವ ಸಮಯದಲ್ಲಿ ಹೇಗೆ ಇರಬೇಕೆಂಬುದು.

ನನ್ನನ್ನೂ ನಮ್ಮಾಕೆಯನ್ನೂ ನಮ್ಮ ಹುಡುಗರನ್ನೂ ನೀವು ಸಿಡುಕು ಮೋರೆಗಳೆಂದು ತಿಳಿಯಬಹುದು. ಅದು ಸರ್ವಥಾ ಹಾಗಲ್ಲ. ಮನುಷ್ಯರಲ್ಲಿ ಒಳ್ಳೆಯವರು, ಕೆಟ್ಟವರು, ಕೋಪಿಷ್ಠರು, ಸಾಧುಗಳು ಎಂಬ ವ್ಯತ್ಯಾಸವೇ ಇಲ್ಲ. ಗಳಿಗೆ ಒಳ್ಳೆಯದಾಗಿದ್ದರೆ ಮನುಷ್ಯನೂ ಒಳ್ಳೆಯವನೆ. ಪ್ರತಿಯೊಬ್ಬ ಮನುಷ್ಯನು ತ್ರಿಗುಣಾತ್ಮಕನು. ಸಾತ್ವಿಕ, ರಾಜಸ, ತಮೋಗುಣಗಳಿಂದ ಕೂಡಿದವನು. ಹಾಲಿನವನು ಹೊತ್ತಿಗೆ ಸರಿಯಾಗಿ ಬಾರದೆ ಕಾಫಿಗೆ ತಡವಾದರೆ ಮನುಷ್ಯನು ತಮೋಗುಣವುಳ್ಳವನಾಗುವನು. ಕಾಫಿ ದೊರೆತ ಮೇಲೆ ಸತ್ವಗುಣವುಳ್ಳವನಾಗುವನು. ಮನುಷ್ಯನು ಒಳ್ಳೆಯವನು ಕೆಟ್ಟವನು ಎಂಬುದಕ್ಕೆಲ್ಲಾ ಕಾಫಿಯು ಹೊಟ್ಟೆಯೊಳಗಿದೆಯೊ ಹೊರಗಿದೆಯೊ ಎಂಬುದೇ ಕಾರಣ. ಇದೇ ಕಾಫಿಗೂ ಸಾರಾಯಿಗೂ ಇರುವ ಮುಖ್ಯವಾದ ವ್ಯತ್ಯಾಸ. ಸಾರಾಯಿ ಹೊಟ್ಟೆಯೊಳಗಿದ್ದರೆ ಜಗಳಕ್ಕೇ ಪ್ರಾರಂಭಿಸುತ್ತದೆ. ಕಾಫಿ ಹೊಟ್ಟೆಯೊಳಗಿಲ್ಲದೆ ಹೊರಗಿದ್ದರೆ ದೊಡ್ಡ ಜಗಳವನ್ನು ಆರಂಭಿಸುವುದು. ನಮ್ಮಾಕೆಗೆ ನೋನಳ ಮೇಲೆ ಪ್ರೀತಿಯಿಲ್ಲವೇ? ಒಳ್ಳೆಯವನನ್ನು ಕೆಟ್ಟವನನ್ನಾಗಿಯೂ, ಕೆಟ್ಟವನನ್ನು ಒಳ್ಳೆಯವನನ್ನಾಗಿಯೂ ಮಾಡುವುದು

ಕಾಫಿಯೇ. ಇದರಿಂದಲೇ ತಾನೆ ಮನೆಗೆ ಯಾರಾದರೂ ಬಂದರೆ ಮೊದಲು 'ಕಾಫಿ ತಂದು ಅವರಿಗೆ ಕೊಡು' ಎನ್ನುವುದು.

ನಾನು ಒಂದು ಹೆಣ್ಣುಮಕ್ಕಳ ಪಾಠಶಾಲೆಯನ್ನು ನಡೆಸುತ್ತಿದ್ದೇನೆ. ಅದಕ್ಕೆ ದ್ರವ್ಯ ಸಹಾಯವನ್ನು ದೊರಕಿಸಲು ಒಬ್ಬ ಶ್ರೀಮಂತನನ್ನು ಕಾಣಬೇಕೆಂದು ಉದ್ದೇಶಿಸಿದೆ. ಆ ಶ್ರೀಮಂತನಿಗೆ ಆಪ್ತರಾದ ಒಬ್ಬರನ್ನು ಕರೆದುಕೊಂಡು ಹೋದರೆ ಕೆಲಸವು ಕೈಗೂಡೀತೆಂದು ಬಗೆದು ಗಣೇಶನ್‌ರವರನ್ನು ಸಂಗಡ ಬರಲು ಕೇಳಿದೆ. 'ಆಹಾ! ಖಂಡಿತ ಕರೆದುಕೊಂಡು ಹೋಗುವೆನು. ಮೇಲಾಗಿ ಅವರು ನನ್ನ ಮಾತನ್ನು ತಳ್ಳಿಹಾಕುವವರಲ್ಲ' ಎಂದು ಸಂತೋಷದಿಂದ ಅವರು ಒಪ್ಪಿಕೊಂಡರು. ಇಬ್ಬರೂ ಕೂಡಿ ಹೊರಟೆವು. ದಾರಿಯಲ್ಲೆಲ್ಲ ಗಣೇಶನ್‌ರವರು ಆ ಶ್ರೀಮಂತರೂ ತಾವೂ ಹೇಗೆ ಅನ್ಯೋನ್ಯರಾಗಿರುವರೆಂಬುದನ್ನು ವರ್ಣಿಸುತ್ತ ಬಂದರು. 'ನೀವು ಬೇಕಾದರೆ ನೋಡಿರಿ, ನನ್ನನ್ನು ಕಾಣುತ್ತಲೇ ಅವರು ಓಡಿಬಂದು ಅಪ್ಪಿಕೊಂಡು ಬಿಡುವರು. ನೋಡಿ, ನಮ್ಮೊಳಗೆ ಅಷ್ಟು ಪ್ರೀತಿ' ಎಂದು ಹೇಳಿದರು.

ನಾವು ಆ ಪ್ರಭುವಿನ ಮನೆಯನ್ನು ತಲುಪುವ ಹೊತ್ತಿಗೆ ಬೆಳಗ್ಗೆ ಏಳೂವರೆ ಗಂಟೆಯಿರಬಹುದು. ಪ್ರಭುವು ಹೊರಗೆ ಕುಳಿತಿದ್ದಾರೆ. ಹಾಲಿನವನು ಇನ್ನೂ ಬಾರದೆ ಹೋಗಿರುವುದರಿಂದ ಅವರು ಒಳಗೊಳಗೆ ಉಕ್ಕಿ ಬರುತ್ತಿರುವ ಕೋಪದಿಂದ ಕುಳಿತಿರುವರೆಂಬುದು ಯಾರಿಗೆ ಗೊತ್ತು? ನನ್ನ ಸ್ನೇಹಿತರನ್ನೂ ನನ್ನನ್ನೂ ನೋಡಿದೊಡನೆ 'ಕುಳಿತುಕೊಳ್ಳಯ್ಯ' ಎಂದು ಹೇಳಿದರು ನನ್ನ ಸ್ನೇಹಿತನ ಕಡೆಗೆ ತಿರುಗಿ. 'ಕುಳಿತುಕೊಳ್ಳಿ ಸಾರ್' ಎಂದರು ನನ್ನನ್ನು ನೋಡಿ. ಪುನಃ ಐದು ನಿಮಿಷಗಳ ವರೆಗೆ ಒಂದು ಮಾತೂ ಇಲ್ಲ. ಏನನ್ನೋ ನೆನೆದು ಮನಸ್ಸು ಕುದಿಯುತ್ತಿರುವ ಹಾಗೆ ಕಂಡಿತು. ಅನಂತರ ಇದ್ದಕ್ಕಿದ್ದಹಾಗೆ 'ಈ ಹಾಲಿನವರಿದ್ದಾರಲ್ಲ, ಎಲ್ಲಾ ಶುದ್ಧ ಅಯೋಗ್ಯರು ಸಾರ್. ಈ ಕಳ್ಳರು ಎಲ್ಲರನ್ನೂ ಕೊಳ್ಳೆ ಹೊಡೆಯುತ್ತಾರೆ. ಒಬ್ಬೊಬ್ಬರನ್ನೂ ಕಂಬಕ್ಕೆ ಕಟ್ಟಿ, ಚೆನ್ನಾಗಿ ಹೊಡೆದು, ಆರಾರು ತಿಂಗಳು ಜೈಲಿನಲ್ಲಿ ಹಾಕಿಬಿಡಬೇಕು. ಹೊತ್ತು ಎಷ್ಟಾಯಿತು,

ನೋಡಿ ಸಾರ್, ಇನ್ನೂ ಅವನು ಬರಲಿಲ್ಲ. ಇವರ ವಿಷಯದಲ್ಲಿ ಅಯ್ಯೋ ಪಾಪ ಅನ್ನಬಾರದು. ನೀವೇನು ಹೇಳುತ್ತೀರಿ?' ಎಂದರು.

ನನ್ನ ಸ್ನೇಹಿತರು ಬಾಯಿ ತೆಗೆಯಲಿಲ್ಲ. ಬಂದವನನ್ನು ಸರಿಯಾಗಿ ಬಾ ಎಂದು ಸಹ ಹೇಳಲಿಲ್ಲವಲ್ಲ ಎಂದು ಅವರಿಗೆ ಬಹಳ ಕೋಪ. ನಾನು ಮರ್ಯಾದೆಗೋಸ್ಕರ 'ಹೌದು ಹೌದು, ಎಲ್ಲರೂ ಅಯೋಗ್ಯ ಹುಡುಗರು' ಎಂದೆನು.

'ಅವರಿಗೆ ಬುದ್ಧಿ ಕಲಿಸುವುದಕ್ಕೆ ಒಂದೇ ದಾರಿ, ಸಾರ್. ಕಂಬಕ್ಕೆ ಕಟ್ಟಿ ಹೊಡೆಯಬೇಕು. ರಕ್ತವು ಹೊರಕ್ಕೆ ಹರಿಯಬೇಕು.'

ಈ ಸಮಯದಲ್ಲಿ ನನ್ನ ಸ್ನೇಹಿತರು ನಾವು ಬಂದ ವಿಷಯವನ್ನು ಕುರಿತು ಹೇಳಿದರು.

'ನಿಜವಾಗಿಯೂ ಹೇಳುತ್ತೇನೆ, ಸಾರ್. ಈ ಹೆಣ್ಣುಮಕ್ಕಳ ವಿದ್ಯಾಭ್ಯಾಸವನ್ನು ಕಂಡರೆ ನನಗೆ ಸರಿ ಎನಿಸುವುದಿಲ್ಲ. ಈ ವಿಷಯಕ್ಕೆ ಒಂದು ಕಾಸು ಕೊಡುವುದಕ್ಕೂ ಸಹ ನನಗೆ ಇಷ್ಟವಿಲ್ಲ. ಹೆಣ್ಣುಮಕ್ಕಳ ವಿದ್ಯಾಭ್ಯಾಸವು ಕೇವಲ ಹಾಸ್ಯವಾಗಿದೆ. ಇವರಿಗೇಕೆ ಸಾರ್, ಆಲ್‌ಜೀಬ್ರ, ಜ್ಯಾಮಿಟ್ರಿ?. . . .' ಎಂದು ಆವೇಶದಿಂದ ಪ್ರಾರಂಭಿಸಿದರು.

ಅಷ್ಟರೊಳಗೆ ಪ್ರಭುವಿಗೂ ನನಗೂ ಕಾಫಿ ಬಂದುಬಿಟ್ಟಿತು. ಹಾಲಿನವನು ಮನೆಯ ಹಿಂಭಾಗದಿಂದ ಬಂದು ಹಾಲು ಕೊಟ್ಟು ಹೋಗಿರಬೇಕು.

'ಕಾಫಿ ತೆಗೆದುಕೊಳ್ಳಿ ಸಾರ್' ಎಂದು ಸಂತೋಷದಿಂದ ಮಾತನಾಡಲಾರಂಭಿಸಿದರು. 'ಏನಯ್ಯ ಗಣೇಶ, ನಿನ್ನನ್ನು ಕಾಣುವುದೇ ಕಷ್ಟವಾಗಿದೆ. ನಿನ್ನೆ ರಾತ್ರಿ ಕೂಡ ನಮ್ಮಾಕೆಯೂ ನಾನೂ ನಿನ್ನನ್ನು ಕುರಿತೇ ಮಾತನಾಡುತ್ತಿದ್ದೆವು. 'ಎಲ್ಲಿ, ಅವರು ಈ ಕಡೆ ಬರುವುದೇ ಇಲ್ಲವಲ್ಲ' ಎಂದು ಕೇಳಿದಳು ನನ್ನನ್ನು. ನಿನ್ನನ್ನು ಕುರಿತು ಮಾತನಾಡದ ದಿವಸವೇ ಇಲ್ಲ!' ಎಂದರು ನನ್ನ ಸ್ನೇಹಿತರನ್ನು ನೋಡಿ.

'ನೀನು ನನ್ನ ವಿಚಾರ ಮಾತನಾಡುತ್ತಿರುವೆಯೊ ಇಲ್ಲವೊ ನಾ

ಕಾಣೆ. ಈಗ ಎದುರಿಗೆ ಬಂದಿದ್ದೇನೆ. ಜಾ ಎಂದು ಸಹ ಒಂದು ಮಾತು ಇಲ್ಲ. ನನ್ನನ್ನು ಕಣ್ಣು ಎತ್ತಿಕೂಡ ನೋಡಲಿಲ್ಲ.'

'ಕೋಪಿಸಿಕೊಳ್ಳಬೇಡ ಗಣೇಶ! ಹಾಲಿನವನು ಬೆಳಗ್ಗೆ ಸರಿಯಾಗಿ ಬರಲಿಲ್ಲವೆಂದು ಕೋಪ ಉಕ್ಕಿಬಂದಿತ್ತು. ಹಾಲಿನವನು ಬರದಿದ್ದರೆ ಕೋಪ ಬಂದುಬಿಡುತ್ತೆ. ಆದರೆ ಅವನಿಗೆ ಎಷ್ಟೊ ಕಷ್ಟಗಳು ಪಾಪ! ಆ ಕೀಳು ಜಾತಿ ಜನ ಪಡುವ ಕಷ್ಟ ನಮಗೇನು ಗೊತ್ತಾಗುತ್ತೆ. ಬೇಕುಬೇಕೆಂದು 'ಲೇಟ್' ಆಗಿ ಬರುತ್ತಾನೆಯೆ? ಅವನಿಗೆ ಏನು ಕಷ್ಟವೊ! ಆ ಸಮಯ ದಲ್ಲಿ ಕೋಪಬಂದರೂ ಆಮೇಲೆ ನಿಧಾನಿಸಿಕೊಂಡು ತಾನೇ ಹೋಗ ಬೇಕು. ನೀವು ಏನು ಹೇಳುವಿರಿ?' ಎಂದರು ನನ್ನನ್ನು ನೋಡಿ.

'ಹೌದು, ಹೌದು' ಎಂದೆ ನಾನು.

'ಹೆಣ್ಣುಮಕ್ಕಳ ಪಾಠಶಾಲೆ ಎಂದು ಹೇಳಿದಿರಲ್ಲ, ಆ ವಿಚಾರದಲ್ಲಿ ನನ್ನ ಅಭಿಪ್ರಾಯವನ್ನು ಬೇರೆಯಾಗಿ ತಿಳಿದುಕೊಳ್ಳಬೇಡಿ. ಹೆಣ್ಣುಮಕ್ಕ ಳಿಗೆ ವಿದ್ಯಾಭ್ಯಾಸ ಬೇಡವೆಂದಲ್ಲ ನಾನು ಹೇಳುವುದು. ಅವರಿಗೆ ಬೇಕಾ ಗುವ ಮತ್ತು ಸರಿಯಾದ ವಿದ್ಯಾಭ್ಯಾಸವನ್ನು ಕೊಡುತ್ತಿಲ್ಲವೆಂಬುದೇ ನನ್ನ ಅಭಿಪ್ರಾಯ. ಸಂಸಾರಕ್ಕೆ ಉಪಯೋಗವಾಗುವ ವಿದ್ಯಾಭ್ಯಾಸ ವನ್ನು ಮಾಡಿಸದೆ ತಲೆತಿರುಗುವಹಾಗೆ ಕಲಿಸುತ್ತಾರಲ್ಲ ಎಂಬುದೇ ನನ್ನ ದೂರು'

'ನಮ್ಮ ಪಾಠಶಾಲೆಯಲ್ಲಿ ಆ ರೀತಿ ಇಲ್ಲ. ಮೊದಲು ಸಂಸಾರಕ್ಕೆ ಉಪಯೋಗವಾಗುವ ವಿಷಯಗಳನ್ನು ಕಲಿಸುತ್ತೇವೆ. ಅದಕ್ಕೆ ಬೇಕಾ ಗುವ ಪಾಠಗಳನ್ನೇ ಮೊದಲು ಹೇಳುವುದು.'

'ಹಾಗೇನು! ಬಹಳ ಸಂತೋಷ. ಈ ಮೊದಲನೇ ವರ್ಷಕ್ಕೆ ೫೦೦ ರೂಪಾಯಿಗೆ ಚೆಕ್ಕು ಕೊಟ್ಟುಬಿಡುವೆನು. ಅನಂತರ ಪ್ರತಿವರ್ಷವೂ ೨೦೦ ರೂಪಾಯಿಗಳನ್ನು ತೆಗೆದುಕೊಂಡು ಹೋಗಿ. ಏನು, ಸರಿತಾನೇ?'

'ಬಹಳ ಸಂತೋಷ, ತೃಪ್ತಿಯಾಯಿತು' ಎಂದು ಸಂತೋಷದಿಂದ ಹೇಳಿದೆನು.

ಅಂದಿನಿಂದ ಯಾರನ್ನು ಹೋಗಿ ನೋಡಬೇಕಾದರೂ ಸರಿ, ಸ್ನೇಹಿತರಾಗಿರಲಿ, ಬೇರೆಯವರಾಗಿರಲಿ, ಮೊದಲು ಆ ಮನೆಯಲ್ಲಿ ಯಾರನ್ನಾದರೂ ರಹಸ್ಯವಾಗಿ ಕರೆದು 'ಹಾಲಿನವನು ಬಂದನೆ, ಆಸಾಮಿಯು ಕಾಫಿ ಕುಡಿದಿದ್ದಾಯಿತೆ?' ಎಂದು ವಿಚಾರಿಸಿ, ಆನಂತರವೆ ಆಸಾಮಿಯನ್ನು ನೋಡುವುದು.

ಮನುಷ್ಯರಲ್ಲಿ ಒಳ್ಳೆಯವರು ಯಾರು, ಕೆಟ್ಟವರು ಯಾರು? ಎಲ್ಲಾ ಆ ವೇಳೆಯ ಮಹಿಮೆ! ಹಾಲಿನವನು ಬಂದನೇ ಇಲ್ಲವೇ? ಇದರಲ್ಲಿ ತಾನೇ ಇರುವುದು ಸೂಕ್ಷ್ಮವೆಲ್ಲ!



# ದೇವಾನಿ

**ಶ್ರೀಮಾನ್ ಚಕ್ರವರ್ತಿ ರಾಜಗೋಪಾಲಾಚಾರ್ಯರ** ಪರಿಚಯವನ್ನು ಬರೆಯುವುದು ಹೆಡ್ಡತನವಾದೀತು. ಹಿಂದೂಸ್ಥಾನದ ರಾಜಕೀಯಾಕಾಶದಲ್ಲಿ ಅವರು ಚಂದ್ರನಂತೆ. ಇವರನ್ನು ಅನೇಕರು ನೋಡಿ ಬಲ್ಲರು. ಇವರ ದರ್ಶನಲಾಭವನ್ನು ಪಡೆಯದವರು ಇವರ ವಿಚಾರವನ್ನು ಕೇಳಿ, ಓದಿ ಬಲ್ಲರು.

ತಮಿಳಿನಲ್ಲಿ ಆಚಾರ್ಯರು ಅನೇಕ ಲೇಖನಗಳನ್ನೂ ಕತೆಗಳನ್ನೂ ಬರೆದಿದ್ದಾರೆ; ಈಗಲೂ ಬರೆಯುತ್ತಿದ್ದಾರೆ. ಇದಲ್ಲದೆ ಉಪನಿಷತ್ತು, ಗೀತೆ ಇವುಗಳ ಮೇಲೆ ಸರಳವಾದ ಪುಸ್ತಕಗಳನ್ನು ಬರೆದು ಅವುಗಳ ಸಾರವನ್ನು ತಮಿಳರಿಗೆ ಒದಗಿಸಿದ್ದಾರೆ. ಇವೆಲ್ಲಕ್ಕಿಂತ ಮಿಗಿಲಾದ ಭಾಷಾಸೇವೆಯೆಂದರೆ ಅವರು ತಮಿಳು ಭಾಷೆಗೆ ಎಷ್ಟೋ ಹೊಸ ಶಬ್ದಗಳನ್ನು ರಚಿಸಿ ಸೇರಿಸಿಕೊಟ್ಟಿರುವುದು.

ಆಚಾರ್ಯರು ಉತ್ತಮ ಪ್ರಚಾರಕರು. ಕತೆಗಳನ್ನು ಇವರು ಪ್ರಚಾರ ದೃಷ್ಟಿಯಿಂದಲೇ ಬರೆದಿದ್ದಾರೆನ್ನಬಹುದು. 'ದೇವಾನಿ' ಯ ಕಥೆಯಲ್ಲಿ ಅವರು ಒಂದು ತತ್ವದ ಪ್ರತಿಪಾದನೆಯನ್ನು ಲಕ್ಷ್ಯದಲ್ಲಿಟ್ಟುಕೊಂಡಿದ್ದರೂ ಅವರ ಲೇಖನಿಯಿಂದ ನಮ್ಮ ಸಮಾಜದ ಒಂದು ಮನಕರಗುವ ಸುಂದರ ಚಿತ್ರವು ಹೊರಬಿದ್ದಿದೆ.

೧

ರಾಮನಾಥ ಅಯ್ಯರೂ ಅವರ ಹೆಂಡತಿ ಸೀತಾಲಕ್ಷ್ಮಿಯೂ ತಮ್ಮ ಮೋಟಾರು ಗಾಡಿಯಲ್ಲಿ ಚೈನಾ ಬಜಾರಿಗೆ ಹೋಗಿ ಹಲವು ಸಾಮಾನು ಗಳನ್ನು ಕೊಂಡುಕೊಂಡು ಪಕ್ಕದಲ್ಲಿದ್ದ ವಿಶ್ರಾಂತಿಗೃಹವನ್ನು ಹೊಕ್ಕು ಫಲಾಹಾರವನ್ನು ಸ್ವೀಕರಿಸಿ ಬಂದು ತಮ್ಮ ಗಾಡಿಯನ್ನು ಹತ್ತಿದರು.

'ಸಮುದ್ರದ ಕಡೆ ಹೋಗೋಣವೆ?' ಎಂದರು ರಾಮನಾಥ ಅಯ್ಯರು.

'ಬೀಚಿಗೇಕೆ? ಜನಗಳ ಗಲಾಟೆಯಿಲ್ಲದ ಸ್ಥಳಕ್ಕೆ ಹೋಗಿ ಗಾಡಿ ಯನ್ನು ನಿಲ್ಲಿಸಹೇಳಿರಿ. ಜನಗಳ ಗುಂಪನ್ನು ಕಂಡರೆ ನನಗ್ಯಾಕೊ ಬೇಸರ ವಾಗುತ್ತೆ. ಅದೊ, 'ಟಾಯ್ಸ್' ಮಾರುತ್ತಾರೆ. ಯಾವುದಾದರೂ ಎರಡು ತೆಗೆದುಕೊಳ್ಳಿ ಹುಡುಗರಿಗೆ. ತೆಗೆದುಕೊಂಡು ಹೋಗೋಣ.'

ಸೀತಾಲಕ್ಷ್ಮಿಯು ಇದನ್ನು ಹೇಳುವ ಹೊತ್ತಿಗೆ ಸರಿಯಾಗಿ ಆಕೆಯ ಮನೋಭಿಪ್ರಾಯವನ್ನು ಹೇಗೋ ತಿಳಿದುಕೊಂಡು ಆ ಬೊಂಬೆಯ ವ್ಯಾಪಾರಿಯು ಗಾಡಿಯ ಬಳಿಗೆ ಬಂದನು. ಗಾಡಿಯಲ್ಲಿ ಕುಳಿತುಕೊಂಡೇ ಅವರು ಬೆಲೆಯನ್ನು ವಿಚಾರಿಸಿ ಸಾಮಾನುಗಳನ್ನು ಆರಿಸಿ ತೆಗೆದುಕೊಂಡರು. ಆ ಹೊತ್ತಿಗೆ ಗಾಡಿಯ ಮತ್ತೊಂದು ಬಾಗಿಲ ಬಳಿ ಒಬ್ಬ ಎಳೇ ಪ್ರಾಯದ ಹೆಣ್ಣು ಹುಡುಗಿ—ತಿರುಕಳು—ಬಂದು ಸಣ್ಣ ಮಗುವನ್ನು ಕೈಯಲ್ಲಿ ಎತ್ತಿ ತೋರಿಸುತ್ತ 'ಅಯ್ಯಾ, ಧರ್ಮಕೊಡಿ. ಎಳೇ ಮಗುವನ್ನು ನೋಡಿ, ಅಮ್ಮಾ!' ಎಂದಳು.

'ಇದೆಲ್ಲ ಜಪಾನ್ ಸಾಮಾನುಗಳು, ಅಲ್ಲವೆ?' ಎಂದು ಕೇಳಿದರು ರಾಮನಾಥ ಅಯ್ಯರು.

'ಹೌದು, ಎಲ್ಲವೂ ಜಪಾನ್ ಸಾಮಾನೇ. ಬೇರೆ ಯಾವುದಿದೆ? ನಮ್ಮ ಊರಿನಲ್ಲಿ ಇದೆಲ್ಲ ಎಲ್ಲಿ ಮಾಡುತ್ತಾರೆ?' ಎಂದು ವ್ಯಾಪಾರಿಯು ಹೇಳಿದನು.

ತಿರುಕಳು ಮತ್ತೊಂದು ಸಲ ಬೇಡಿದಳು.

'ವ್ಯಾಪಾರಮಾಡುತ್ತಿರುವಾಗ ಇದೆಲ್ಲಿಯ ಶನಿಯೋ! ಈ ಊರಿನಲ್ಲಿ ತಿರುಕರ ಹಾವಳಿ ಬಹಳವಾಗಿ ಹೋಗಿದೆ' ಎಂದು ಸೀತಾಲಕ್ಷ್ಮಿಯು ಗದರಿಸಿದಳು.

'ಹೊಟ್ಟೆಗಿಲ್ಲದೆ ಹಸಿವಾಗುತ್ತಿದೆಯಮ್ಮ; ಕಣ್ಣೆತ್ತಿ ನೋಡಮ್ಮ, ನೀನು ಮಹಾರಾಣಿಯಾಗಿ ಬಾಳಮ್ಮ!' ಎಂದು ತಿರುಕಳು ಬೇಡಿದಳು.

'ಹೋಗುತ್ತೀಯೋ? ಪೋಲೀಸಿನವನನ್ನು ಕರೆಸಬೇಕೋ?' ಎಂದು ಸೀತಾಲಕ್ಷ್ಮಿಯು ಬೆದರಿಸಿದಳು.

'ಹಾಲಿಲ್ಲದೆ ಬಹಳಾ ಕಷ್ಟಪಡುತ್ತಿದೇವಮ್ಮ, ಒಂದು ಆಣೆ ಧರ್ಮವಾಡಿರಿ, ಅಮ್ಮಾ! ಎಷ್ಟೋ ಹಣ ವೆಚ್ಚ ಮಾಡುತ್ತೀರಿ, ದೊರೆಗಳೆ!'

ಬೆಲೆಗೆ ತೆಗೆದುಕೊಂಡ ಸಾಮಾನುಗಳನ್ನು ಗಾಡಿಯಲ್ಲಿ ತೆಗೆದು ಇಟ್ಟುಕೊಂಡು 'ಬಿಡು ಗಾಡಿಯನ್ನು, ಬೀಚಿಗೆ ಹೋಗೋಣ' ಎಂದರು ರಾಮನಾಥ ಅಯ್ಯರು.

ಮೋಟಾರು ನಡೆಯಿಸುವವನು ತಿರುಕಳಿಗೆ ದಾರಿಬಿಡಹೇಳಿ ಗಾಡಿಯನ್ನು ನಡೆಯಿಸಿದನು.

'ಅಯ್ಯಾ! ಅಯ್ಯಾ!' ಎಂದು ತಿರುಕಳು ಸ್ವಲ್ಪದೂರ ಗಾಡಿಯನ್ನು ಹಿಡಿದುಕೊಂಡು ಓಡಿದಳು.

'ಓಡಬೇಡ, ಸತ್ತುಹೋಗುವಿ!' ಎಂದು ರಾಮನಾಥ ಅಯ್ಯರು ಗಟ್ಟಿಯಾಗಿ ಹೇಳಿದರು. ಆಗ ತಿರುಕಳ ಮುಖವನ್ನು ನೋಡಿದರು. ಹಿಂದೆ ಎಲ್ಲಿಯೋ ಅವಳನ್ನು ನೋಡಿರುವಹಾಗೆ ಅನಿಸಿತು ಅವರಿಗೆ.

ಗಾಡಿಯು ವೇಗವಾಗಿ ಹೊರಟಮೇಲೆ 'ಅಯ್ಯೋ ಪಾಪ! ಬಲು ಚಿಕ್ಕ ಹುಡುಗಿ. ಮೋರೆಯಿಂದ ನಮ್ಮ ಊರಿನವಳ ಹಾಗೆ ಕಾಣುತ್ತದೆ' ಎಂದರು.

ಅದಕ್ಕೆ ಸೀತಾಲಕ್ಷ್ಮಿ 'ಯಾವ ಊರ ಶನಿಯೋ? ಅವಳನ್ನು ಕಟ್ಟಿಕೊಂಡು ನಮಗೇನು? ಎಲ್ಲಿ ಅದನ್ನು ಕೊಡಿ ನೋಡೋಣ; ಇದೇನು, ಹೊಸ ಮಾದರಿಯದು? ಏರೋಪ್ಲೇನೇ? 'ಕೀ' ಕೊಡುವುದೊ? ಅಥವಾ ಬರೇ ಬೊಂಬೆಯೊ?' ಎಂದು ಆಟದ ಸಾಮಾನುಗಳನ್ನು ಒಂದೊಂದಾಗಿ ನೋಡುತ್ತ ಸಮುದ್ರದ ದಂಡೆಯನ್ನು ಮುಟ್ಟಿದರು.

೨

ಸೇಲಮ್ಮಿನ ಪೊನಮ್ಮಾಸ ಪೇಟೆಯಲ್ಲಿನ ದೊಡ್ಡಣ್ಣ ಮೊದಲಿಯಾರ್ ಬೀದಿಯಲ್ಲಿ ಒಂದು ಬಡ ನೆಯ್ಗೆವರ ಸಂಸಾರ. ವೈಯಾಪುರಿಗೆ ಮೂವತ್ತು ವರ್ಷ ವಯಸ್ಸು. ಅವನ ತಂಗಿ ದೇವಾನಿಗೆ ಇಪ್ಪತ್ತು ವರ್ಷ. ಇನ್ನೂ ಮದಿವೆಯಾಗಿರಲಿಲ್ಲ. ತಾಯಿ ಪಳನಿಯಮ್ಮ. ಮೂವರೂ ತಮ್ಮ ವಂಶ ಪಾರಪರ್ಯವಾಗಿ ಬಂದಿದ್ದ ಕೆಲಸವನ್ನು ಮಾಡುತ್ತ ಕಷ್ಟದ ಬಾಳನ್ನು ಸಾಗಿಸಿಕೊಂಡು ಹೋಗುತ್ತಿದ್ದರು. ದಿನವೆಲ್ಲಾ ಮೂವರೂ ದುಡಿದರೆ ವಾರವೊಂದಕ್ಕೆ ನಾಲ್ಕು ರೂಪಾಯಿಗಳ ಸಂಪಾದನೆ.

ಬರಬರುತ್ತ ಕೈಮಗ್ಗದ ನೆಯ್ಗೆ ವ್ಯಾಪಾರ ಕಡಿಮೆಯಾಗಿ ಕೂಲಿಯೂ ಕಡಿಮೆಯಾಗುತ್ತ ಹೋಯಿತು. ಅನಂತರ ಆ ಕಡಿಮೆ ಕೂಲಿಯೂ ಸಹ ಸಿಗದೆ ಕೆಲವರು ತಲ್ಲಣಿಸಿ ಹೋದರು. ಸೇಲಮ್ಮಿನಲ್ಲಿ ಅನೇಕ ಕೈಮಗ್ಗಗಳ ಜೊತೆಗೆ ವೈಯ್ಯಾಪುರಿಯ ಕೈಮಗ್ಗವೂ ಕೆಲಸವಿಲ್ಲದೆ ಬಿದ್ದಿತು. ದೇವಾನಿಯು ಇಬ್ಬರು ಬ್ರಾಹ್ಮಣ ಉದ್ಯೋಗಸ್ಥರ ಮನೆಯ ಬಾಗಿಲನ್ನು ಗುಡಿಸಿ ಸಾರಿಸಿ ಚಿಲ್ಲರೆ ಕೆಲಸಗಳನ್ನು ಮಾಡಲು ಪ್ರಾರಂಭಿಸಿದಳು. ಅದರಿಂದ ತಿಂಗಳಿಗೆ ಮೂರು ರೂಪಾಯಿ ಕೂಲಿ ಬರುತ್ತಿತ್ತು. ತಾಯಿ ಪಳನಿಯಮ್ಮನು ಬೇರೊಂದು ಮನೆಯಲ್ಲಿ ಬೆಳಗಿನ ಹೊತ್ತು ಕೆಲಸಮಾಡಿ ತಿಂಗಳಿಗೆ ಒಂದು ರೂಪಾಯಿ ಸಂಪಾದಿಸುತ್ತಿದ್ದಳು. ವೈಯಾಪುರಿ ನೆಯ್ಗೆಯ ಮುಖಂಡರಬಳಿ ಕೆಲಸಕ್ಕಾಗಿ ಅಲೆದಲೆದು ಬೇಸತ್ತನು. ಯಾವ ಸ್ಥಳದಲ್ಲಿಯೂ ಕೆಲಸ ಸಿಕ್ಕದೆ ಹೋಗಲು ಅವನು ಕೆಲವು ದಿನಗಳನಂತರ ತಾಯಿಗೆ ಹೇಳಿ ಬೆಂಗಳೂರಿಗೆ ಹೋದನು. ಅಲ್ಲಿ ಯಾವುದಾದರೂ ಕಾರ್ಖಾನೆಯಲ್ಲಿ ಕೆಲಸವನ್ನು ಹುಡುಕೋಣವೆಂದು ಅವನ ಜೊತೆಯಲ್ಲಿ ಇನ್ನೂ ಕೆಲವು ಮಂದಿ ಹೊರಟರು.

ಕೆಲವು ದಿನಗಳು ಅಲೆದಾಡಿದನಂತರ ವೈಯ್ಯಾಪುರಿ ಒಂದು ಗಿರಣಿಯಲ್ಲಿ ಕೆಲಸಕ್ಕೆ ಸೇರಿದಹಾಗೆ ಪತ್ರ ಬರೆದನು. ಅವನಿಗೆ ಸ್ವಲ್ಪ ಓದು ಬರೆಹ ಬರುತ್ತಿತ್ತು. ಚಿಕ್ಕಂದಿನಲ್ಲಿ ಅವನ ತಂದೆ ಅವನನ್ನು ಪೊನಮ್ಮಾ

ಪೇಟೆಯ ಮುನಿಸಿಪಲ್ ಪಾಠಶಾಲೆಗೆ ಸೇರಿಸಿದ್ದನು. ಆ ಕಾಲದಲ್ಲಿ ನೆಯ್ಗೆಯವರ ಜೀವನವು ಇಷ್ಟೊಂದು ಕಷ್ಟಮಯವಾಗಿರಲಿಲ್ಲ.

'ಬಹಳ ಕಷ್ಟಪಟ್ಟು, ಯಾರುಯಾರಿಗೊ ಲಂಚವನ್ನು ಕೊಟ್ಟು ಒಂದು ಮಿಲ್ಲಿನಲ್ಲಿ ಸೇರಿದೆ. ದಿನಕ್ಕೆ ಎಂಟಾಣೆ ಕೂಲಿ. ತಿಂಗಳಲ್ಲಿ ೨೬ ದಿವಸ ಕೆಲಸ. ಆದುದರಿಂದ ಹದಿಮೂರು ರೂಪಾಯಿ ಬರುತ್ತದೆ. ಈ ತಿಂಗಳ ಸಂಬಳ ಊಟದ ಖರ್ಚಿನ ಸಾಲಕ್ಕೆ ಸರಿಹೋಗುತ್ತದೆ. ತರುವಾಯ ನಿಮಗೆ ತಿಂಗಳಿಗೆ ಎರಡು ರೂಪಾಯಿ ಕಳುಹಿಸಲು ಸಾಧ್ಯವಾಗುತ್ತದೆ. ದೇವರಿದ್ದಾನೆ' ಎಂದು ವೈಯ್ಯಾಪುರಿ ಬರೆದಿದ್ದನ್ನು ಪಕ್ಕದ ಮನೆಯವನು ಓದಿ ಹೇಳಿದನು. ಮುದುಕಿಗೂ ದೇವಾನಿಗೂ ಉಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ.

‡ ‡ ‡ ‡

ಹತ್ತು ದಿನಗಳ ನಂತರ ಮತ್ತೊಂದು ಪತ್ರ ಬಂದಿತು.

'ಮಾತೋಶ್ರೀಯವರಿಗೆ ಸಾಷ್ಟಾಂಗ ನಮಸ್ಕಾರಗಳು. ದೇವರ ಕೃಪೆಯಿಂದ ನಾನು ಇಲ್ಲಿ ಕ್ಷೇಮ. ನೀನೂ ದೇವಾನಿಯೂ ಸೌಖ್ಯವಾಗಿದ್ದೀರೆಂದು ನಂಬುತ್ತೇನೆ. ನನಗೆ ಈ ಮಿಲ್ಲಿನಲ್ಲಿ ಕೆಲಸ ಮಾಡಲು ಇಷ್ಟವೇ ಇಲ್ಲ. ಮನೆಯಲ್ಲಿ ಮಗ್ಗದ ಮುಂದೆ ಕೂತು ಕೆಲಸ ಮಾಡಿದ ದಿನಗಳನ್ನು ನೆನೆನೆನೆದು ಕಣ್ಣಿನಲ್ಲಿ ನೀರು ಬರುತ್ತದೆ. ಇಲ್ಲಿ ನನಗೆ ಹುಚ್ಚು ಹಿಡಿದಹಾಗಿದೆ. ತಲೆ ಸುತ್ತುತ್ತದೆ. ನನ್ನ ಮನಸ್ಸಿನ ಸ್ಥಿತಿಯನ್ನೂ ಮತ್ತೆ ಹಲವು ತೊಂದರೆಗಳನ್ನೂ ಹೇಳಲಾಗುವುದಿಲ್ಲ. ಊರನ್ನು ಬಿಟ್ಟು ಏಕೆ ಬಂದೆನೊ ಅನಿಸುತ್ತದೆ. ಪಕ್ಕದ ಮನೆಯ ಹುಡುಗನ ಕೈಲಿ ಪತ್ರ ಬರೆಸುವುದಕ್ಕಾದರೆ ಬರೆಸು. ನನ್ನ ವಿಳಾಸ, ಮಲ್ಲೇಶ್ವರ ಕೂಲಿ ಲೈನ್ ಪೊನಮ್ಮಪೇಟೆ ವೈಯ್ಯಾಪುರಿ ಮೊದಲಿಯಾರಿಗೆ ಎಂದು ಬರೆಸು.'

೩

ದೇವಾನಿಯು ಕೆಲಸ ಮಾಡುತ್ತಿದ್ದ ಮನೆಗಳಲ್ಲಿ ಒಂದು, ಪೆನ್ಷನ್ ಉದ್ಯೋಗಸ್ಥರೊಬ್ಬರ ಮನೆ. ಮನೆಯ ಯಜಮಾನಿ ಬಹಳ

ಸಾಧುಸ್ವಭಾವದವಳು. ಕೆಲಸ ಮಾಡಿಸುವುದರಲ್ಲಿ ಸ್ವಲ್ಪ ದುಡುಕಾದರೂ ಸಹ ಮಿಕ್ಕ ವಿಷಯುಗಳಲ್ಲಿ ಬಹಳ ಪ್ರೀತಿಯಿಂದ ಇರುತ್ತಿದ್ದಳು. ಹಳೇ ಸೀರೆ ಕೊಟ್ಟಳು. ಅಡಿಗೆ ಮಾಡಿದ್ದರಲ್ಲಿ ಮಿಕ್ಕ ಅನ್ನ ಸಾರು ದೊರಕುತ್ತಿತ್ತು. ಹೀಗೆಯೇ ಹಲವು ದಿನಗಳು ಕಳೆದವು.

ಇದನ್ನು ದೈವವು ಸಹಿಸಲಿಲ್ಲವೋ ಏನೋ! ಆ ಮನೆಯಲ್ಲಿ ಕೆಲಸ ಮಾಡುತ್ತಿದ್ದ ಅಡಿಗೆಯವನು ದೇವಾನಿಗೆ ಹೆಚ್ಚಾಗಿ ಉಳಿದು ಹೋದ ತಿನ್ನುವ ಪದಾರ್ಥಗಳನ್ನು ಕೊಡುತ್ತಿದ್ದು ಅವಳೊಡನೆ ಸಗಚಾಟಿಕೆ ಮಾಡುತ್ತಿದ್ದನು. ಕಡೆಗೆ ಒಂದು ದಿನ ಅತಿಕ್ರಮಿಸಿ ನಡೆದ.

ದೇವಾನಿಗೆ ಸಹಿಸಲಾರದಷ್ಟು ಕೋಪ ಬಂತು. ಆದರೆ ಯಾರ ಬಳಿಯಲ್ಲಾದರೂ ಹೇಳಿಕೊಳ್ಳಲಿಕ್ಕೆ ನಾಚಿಕೆ. 'ಎಲ್ಲಿಯೂ ಹೇಳಬೇಡ. ನಿನಗೆ ತಿಂಗಳಿಗೆ ಎರಡು ರೂಪಾಯಿ ಕೊಡುತ್ತೇನೆ' ಎಂದು ಆ ಅಯೋಗ್ಯನು ಬಲಾತ್ಕರಿಸಲಾರಂಭಿಸಿದನು.

ದೇವಾನಿಯು ಕೋಪವನ್ನು ಅಡಗಿಸಿಕೊಂಡು ಮನೆಗೆ ಹೋಗಿ ತಾಯಿಯ ಬಳಿ 'ನಾನು ಆ ಬೇವಿನ ಮರದ ಮನೆಯಲ್ಲಿ ಕೆಲಸ ಮಾಡಲಾರೆ' ಎಂದಳು.

ಏತಕ್ಕೆಂದು ವಿಚಾರಿಸಲು ದೇವಾನಿಯು ಬಹಳ ನಾಚಿಕೆಪಟ್ಟುಕೊಂಡು ಬಹಳ ಸಂಕಟದಿಂದ ನಡೆದುದನ್ನು ಹೇಳಿದಳು. ಮುದುಕಿಯು 'ನಾನು ಆ ಮನೆಯ ಯಜಮಾನಿಯ ಹತ್ತಿರ ಹೇಳುತ್ತೇನೆ' ಎಂದು ಹೊರಟಳು.

'ಬೇಡ ಅಮ್ಮಾ, ಅವರ ಹತ್ತಿರ ಹೇಳಿ ಏನು ಪ್ರಯೋಜನ? ನಾನು ಪುನಃ ಅಲ್ಲಿ ಕೆಲಸ ಮಾಡುವುದಕ್ಕೆ ಆಗುವುದಿಲ್ಲ' ಎಂದಳು.

ಬೇರೆ ಕಡೆಗೆ ಕೆಲಸಕ್ಕಾಗಿ ನೋಡಿದರು. ಪ್ರತಿಯೊಂದು ಮನೆಯಲ್ಲೂ ಯಾರಾದರೊಬ್ಬರು ಕೆಲಸಕ್ಕೆ ಇದ್ದೇ ಇರುತ್ತಿದ್ದರು. ಎರಡು ತಿಂಗಳು ಅಲೆದ ಮೇಲೆ ಒಂದು ಮನೆಯಲ್ಲಿ ಕೆಲಸ ದೊರೆಯಿತು.

† † † †

ಆರು ತಿಂಗಳು ಕಳೆದವು. ಬೆಂಗಳೂರಿನಲ್ಲಿ ವೈಯ್ಯಾಪುರಿ ಕೆಲಸ

ಮಾಡುತ್ತಿದ್ದ ಮಿಲ್ಲಿನಲ್ಲಿ ಕೆಲಸಗಾರರ ಸಂಪು ನಡೆಯಿತು. ಒಬ್ಬ ಮೇಸ್ತ್ರಿಯನ್ನು ದೊರೆ ಹೊಡೆದುಬಿಟ್ಟರು. ಅದಲ್ಲದೆ ಅವನನ್ನೂ ಹಲವು ಕೆಲಸಗಾರರನ್ನೂ ಕೆಲಸದಿಂದ ತೆಗೆದುಬಿಟ್ಟರು. ಈ ಕಾರಣದಿಂದ ಕೆಲಸಗಾರರು ಯೂನಿಯನ್ ಸಂಘದಲ್ಲಿ ಸೇರಿ ಒಟ್ಟಾಗಿ ತೀರ್ಮಾನಿಸಿ ಆ ತಿಂಗಳ ಸಂಬಳವನ್ನು ತೆಗೆದುಕೊಂಡನಂತರ ಕೆಲಸಕ್ಕೆ ಹೋಗದೆ ಮುಷ್ಕರ ಹಿಡಿದರು. ಮೈಯ್ಯಾಪುರಿಯೂ ಅದರಲ್ಲಿ ಸೇರಬೇಕಾಯಿತು.

ಒಂದು ತಿಂಗಳ ಕಾಲ ಸಂಪು ನಡೆಯಿತು. ಕೆಲಸಗಾರರು ಗುಂಪು ಗುಂಪಾಗಿ ಕೂತು ಮುಷ್ಕರ ಹಿಡಿದರು. ಮೊದಮೊದಲು ಉತ್ಸಾಹವು ಅಧಿಕವಾಗಿತ್ತು. ಕೈಲಿದ್ದ ಹಣವು ವೆಚ್ಚವಾಗಿ ಹೋದನಂತರ ಉತ್ಸಾಹವು ಕುಂದಿತು. ಸರಕಾರಿ ಉದ್ಯೋಗಸ್ಥರು ಮಧ್ಯಸ್ಥಿಕೆ ಮಾಡಿ ಒಪ್ಪಂದ ಮಾಡಿಸಿದರು. ಎಲ್ಲರೂ ಪುನಃ ಕೆಲಸಗಳಿಗೆ ಹೋದರು. ಒಂದು ವಾರವಾದನಂತರ ಕಾರ್ಖಾನೆಯ ಬಾಗಿಲಲ್ಲಿ ಇಪ್ಪತ್ತೈದು ಜನರನ್ನು ಕೆಲಸದಿಂದ ತೆಗೆದುಹಾಕಿರುವುದಾಗಿಯೂ, ಅವರು ಕಾರ್ಖಾನೆಯೊಳಕ್ಕೆ ಬರಬಾರದೆಂದೂ ನೋಟೀಸು ಹಚ್ಚಿದ್ದರು. ಆ ಇಪ್ಪತ್ತೈದು ಜನರಲ್ಲಿ ಮೈಯ್ಯಾಪುರಿಯೂ ಒಬ್ಬನಾಗಿದ್ದ.

'ನಾನು ಏನು ತಪ್ಪು ಮಾಡಿದೆ? ನಾನು ಹೊಸದಾಗಿ ಬಂದವನು. ನಾನು ಯಾವುದರಲ್ಲಿಯೂ ಸೇರಿದವನಲ್ಲ' ಎಂದು ಮೈಯ್ಯಾಪುರಿ ತನ್ನ ಮೇಸ್ತ್ರಿಯ ಸಂಗಡ ಹೇಳಿದ.

'ದೊಡ್ಡ ದೊರೆಯ ಅಪ್ಪಣೆಯಾಗಿದೆ. ಆ ಪಾಪಿ 'ಟೈಮ್‌ಕೀಪರ್' ರಂಗಸ್ವಾಮಿನಾಯಕನು ಮಾಡಿದ ಕೆಲಸ. ನಿನ್ನ ಹೆಸರನ್ನೂ ಸೇರಿಸಿ ದೊರೆಗೆ ಕೊಟ್ಟುಬಿಟ್ಟ. ನಾನು ಏನೂ ಮಾಡುವುದಕ್ಕೆ ಆಗುವುದಿಲ್ಲ' ಎಂದು ಮೇಸ್ತ್ರಿಯು ಹೇಳಿಬಿಟ್ಟನು.

ಮೈಯ್ಯಾಪುರಿಯು ರಂಗಸ್ವಾಮಿನಾಯಕನ ಹತ್ತಿರವೂ ಹೋಗಿ ಹೇಳಿಕೊಂಡನು. 'ನನಗೆ ಒಂದೂ ಗೊತ್ತಿಲ್ಲ. ಎಲ್ಲಾ ಸಂಬಳ ಬಟವಾಡೆ ಮಾಡುವ ಗುಮಾಸ್ತೆ ಅಯ್ಯರು ಮಾಡಿದ ಕೆಲಸ' ಎಂದ ಅವನು. ಯಾರ ಹತ್ತಿರಕ್ಕೆ ಹೋಗಿ ಹೇಳಿಕೊಂಡರೂ ಪ್ರಯೋಜನವಾಗದೆ

ಹೋಯಿತು. 'ನೀನು ಓದು ಬರೆಹ ಬಲ್ಲವನು. ಉಳಿದವರಿಗೆ ಸಹಾಯ ಮಾಡಿದವನು. ನಿನ್ನನ್ನು ಸೇರಿಸಿಕೊಳ್ಳಲಾಗುವುದಿಲ್ಲ' ಎಂದು ಮ್ಯಾನೇಜರು ಹೇಳಿಬಿಟ್ಟರು.

*  *  *  *

ಹಲವು ದಿನಗಳು ಅಲೆದಲೆದು ಕೈಲಿದ್ದ ಹಣವೆಲ್ಲ ವೆಚ್ಚವಾಗಿ ಬಹಳ ಕಷ್ಟಪಟ್ಟುಕೊಂಡು ವೈಯ್ಯಾಪುರಿ ಮದರಾಸನ್ನು ಹೋಗಿ ಸೇರಿದ. ಇವನ ಹಾಗೆಯೇ ಕೆಲಸದಿಂದ ಹೊರಗೆಹಾಕಲ್ಪಟ್ಟ ಇನ್ನೂ ಹತ್ತು ಜನ ಕೆಲಸಗಾರರು ಇವನ ಜೊತೆಯಲ್ಲೇ ಕೆಲಸ ಹುಡುಕಲು ಮದರಾಸಿಗೆ ಹೊರಟು ಬಂದರು. ಇವರೆಲ್ಲರೂ ತಮ್ಮಲ್ಲಿದ್ದ ಹಣವನ್ನೆಲ್ಲ ಒಟ್ಟಿಗೆ ಸೇರಿಸಿ ಊಟದ ವ್ಯವಸ್ಥೆ ಮಾಡಿಕೊಂಡರು. ಎಂಟು ದಿನಗಳ ತನಕ ಪ್ರತಿಯೊಂದು ಮಿಲ್ಲಿಗೂ ಅಲೆದುದಾಯಿತು.

ವೈಯಾಪುರಿಗೆ ಒಂದು ಮಿಲ್ಲಿನಲ್ಲಿ ಕೆಲಸ ಸಿಕ್ಕಿತು. ಗೇಟಿನಲ್ಲಿ ನಿಲ್ಲುವ ಆಳಿಗೆ ಮತ್ತು ಚಿಕ್ಕ ಉದ್ಯೋಗಸ್ಥರಿಗೆ ಕೊಡಬೇಕಾದ ಮಾಮೂಲು ಹಣಕ್ಕೆ ಐದು ರೂಪಾಯಿ ಬೇಕಿತ್ತು. ಇದಕ್ಕೂ ಮತ್ತು ಊಟದ ವೆಚ್ಚದ ಸಾಲ ತೀರಿಸಲಿಕ್ಕೂ ವೈಯ್ಯಾಪುರಿ ತನ್ನ ಕಿವಿಯಲ್ಲಿ ಹಾಕಿಕೊಂಡಿದ್ದ ಬಂಗಾರದ ಮುರುವನ್ನು ಒಬ್ಬ ವರ್ತಕನ ಹತ್ತಿರ ಒತ್ತೆಯಿಟ್ಟು ಹಣವನ್ನು ತೆಗೆದನು. ವೈಯ್ಯಾಪುರಿ ಮದರಾಸಿನಲ್ಲಿ ಕೆಲಸಕ್ಕೆ ಸೇರಿದ ಸ್ವಲ್ಪ ದಿವಸಗಳಲ್ಲೇ, ಕಷ್ಟಗಳನ್ನು ಮರೆತು ಹೆಂಡ ಕುಡಿಯಲಾರಂಭಿಸಿದ. ಸೇಲಮ್ಮಿನಲ್ಲಿದ್ದಾಗ ಅವನಿಗೆ ಈ ಅಭ್ಯಾಸವಿರಲಿಲ್ಲ. ಅನಂತರ ಜೂಜಿನಲ್ಲಿ ಹಣ ಸಂಪಾದಿಸಬಹುದೆಂದು ಹಲವು ಸ್ನೇಹಿತರು ಅವನಿಗೆ ದಾರಿ ತೋರಿಸಿಕೊಟ್ಟದ್ದರಿಂದ ಆ ಅಭ್ಯಾಸವೂ ಅವನಿಗಾಯಿತು. ಸಂಪಾದಿಸಿದ ಕೂಲಿಯಲ್ಲಿ ಊಟದ ಖರ್ಚು, ಗುಡಿಸಿಲ ಬಾಡಿಗೆ ಮೊದಲಾದವು ಹೋಗಿ ಮಿಕ್ಕಹಣ ಊರಿಗೆ ಕಳಿಸುವ ಬದಲಾಗಿ ಈ ಬಗೆಯ ಹಲವು ದಾರಿಗಳಲ್ಲಿ ವೆಚ್ಚವಾಯಿತು. ಪಠಾಣರ ಹತ್ತಿರವೂ ಸಾಲ ಏರಿತು. ಈ ಕಷ್ಟಗಳನ್ನೆಲ್ಲ ಸಹಿಸಲಾರದೆ ಇನ್ನೂ ಹೆಚ್ಚಾಗಿ ಕುಡಿಯಲಾರಂಭಿಸಿದನು.

ಮೊದಮೊದಲು ಯಾವುದೋ ನೆವಹೇಳಿ ಕಡೆಗೆ ತನ್ನಿಂದ ಏನೂ ಕಳುಹಿಸಲು ಆಗುವುದಿಲ್ಲವೆಂದೂ ಬೇಕಾದರೆ ದೇವಾನಿಯು ಮದರಾಸಿಗೆ ಬಂದು ಯಾವುದಾದರೊಂದು ಮಿಲ್ಲಿನಲ್ಲಿ ಕೆಲಸಕ್ಕೆ ಸೇರಬಹುದೆಂದೂ ಬರೆದು ಬಿಟ್ಟನು. ಆ ಪತ್ರವನ್ನು ನೋಡಿ ದೇವಾನಿಗೂ ಪಳನಿಯಮ್ಮನಿಗೂ ಎದೆ ಒಡೆದಂತಾಯಿತು.

ಕೆಲವು ದಿನಗಳು ಕಳೆದಮೇಲೆ ಒಂದು ದಿನ 'ಏಕಮ್ಮ, ನಾನು ಮದರಾಸಿಗೆ ಏಕೆ ಹೋಗಬಾರದು? ವೈಯ್ಯಾಪುರಿಯ ಜೊತೆಯಲ್ಲಿ ನಾನು ಕೆಲಸಮಾಡಿ ಏನಾದರಷ್ಟು ಸಂಪಾದಿಸಿ ನಿನಗೆ ಕಳುಹಿಸುತ್ತೇನೆ. ಪಟ್ಟಣದಲ್ಲಿ ಅನೇಕ ಜನ ಹೆಂಗುಸರು ಮಿಲ್ಲುಗಳಲ್ಲಿ ಕೆಲಸಮಾಡುತ್ತಾರಂತೆ' ಎಂದಳು ದೇವಾನಿ.

ತಾಯಿಯು ಮೊದಲು ಒಪ್ಪಲಿಲ್ಲ. 'ಅದು ಎಲ್ಲಾದರೂ ಉಂಟೆ? ಅರಿಯದ ಮಕ್ಕಳು ಅಲ್ಲಿಗೆಲ್ಲಾ ಹೋಗಬಹುದೆ?' ಅಂದಳು. ಕೆಲವು ದಿನಗಳು ಹೀಗೆಯೇ ಹೋರಾಡಿ, ಅನಂತರ ಮುದುಕಿಯು ಸಮ್ಮತಿಸಿದಳು. ಪಕ್ಕದ ಮನೆಯ ಮಾರಪ್ಪನ ಹತ್ತಿರ ಕಿವಿಯಲ್ಲಿದ್ದ ಬಂಗಾರದ ಓಲೆಯನ್ನು ಒತ್ತೆಯಿಟ್ಟು ಹನ್ನೆರಡು ರೂಪಾಯಿ ಸಾಲ ತೆಗೆದುಕೊಂಡು ದೇವಾನಿ ಮದರಾಸಿಗೆ ಹೊರಟಳು.

೪

ಮದರಾಸಿನಲ್ಲಿ ವೈಯ್ಯಾಪುರಿಯು ದೇವಾನಿಯನ್ನು ಒಂದು ಮಿಲ್ಲಿನಲ್ಲಿ ದಾರ ತೆಗೆಯುವ ವಿಭಾಗದಲ್ಲಿ ಕೆಲಸಕ್ಕೆ ಸೇರಿಸಿದನು. ವೈಯ್ಯಾಪುರಿ ಇದ್ದುದು ಒಂದು ಮಿಲ್ಲು; ಇವಳಿದ್ದುದು ಬೇರೆ ಇನ್ನೊಂದು. ಇವಳ ಹಾಗೆ ನೂರೈವತ್ತು ಜನ ಹೆಂಗಸರು. ಚಿಕ್ಕವರೂ ದೊಡ್ಡವರೂ ಆ ಮಿಲ್ಲಿನಲ್ಲಿ ಕೆಲಸ ಮಾಡುತ್ತಿದ್ದರು. ದೇವಾನಿ ಮತ್ತು ಅವಳ ಜೊತೆಯಲ್ಲಿ ಕೆಲಸ ಮಾಡುತ್ತಿದ್ದ ಹತ್ತು ಮಂದಿಯಮೇಲೆ ಒಬ್ಬ ಮೇಸ್ತ್ರಿಯಿದ್ದ. ಇವನು ಮೊದಲು ದೇವಾನಿಯನ್ನು ಬಹಳ ಪ್ರೀತಿಯಿಂದ ಕಾಣುತ್ತಿದ್ದನು. ಆಮೇಲೆ ಕೆಲಸದ ವಿಷಯದಲ್ಲಿ ಗದರಿಸಲಾರಂಭಿಸಿದನು. ಮಧ್ಯೆ ಮಧ್ಯೆ

ಬಯ್ಯುತ್ತಲೂ ಇದ್ದ. ಒಬ್ಬಳೇ ಇರುವ ಸಮಯದಲ್ಲಿ ಕಾರಣವಿಲ್ಲದೆಯೆ ಬಹಳ ಸಲ್ಲಾಪ ಮಾಡುತ್ತಿದ್ದ.

'ಇದೇನು, ಇವರು ಹೀಗೆ ಏಕೆ ಮಾಡುತ್ತಾರೆ?' ಎಂದು ತನ್ನ ಜೊತೆಯಲ್ಲಿ ಕೆಲಸಮಾಡುತ್ತಿದ್ದ ಒಬ್ಬಳನ್ನು ದೇವಾನಿಯು ಕೇಳಿದಳು. ಅವಳು ನಕ್ಕು 'ನಿನಗೆ ಗೊತ್ತಿಲ್ಲವೆ? ಪಾಪ! ನೀನು ಹಳ್ಳಿಯವಳು ಅವರ ಹತ್ತಿರ ಸರಿಯಾಗಿ ನಡೆದುಕೊಳ್ಳದೆ ಹೋದರೆ ಸಂಬಳದಲ್ಲಿ ಅರ್ಧಕ್ಕೆ ಮೇಲೆ ದಂಡ ಬೀಳುವುದು. ಅವರನ್ನು ಸಂತೋಷಪಡಿಸಿದರೆ ಹಲವು ಸೌಕರ್ಯಗಳೂ ಉಂಟು' ಎಂದಳು.

ಬಡವರ ಕಷ್ಟವನ್ನು ಯಾರು ತಿಳಿದುಕೊಳ್ಳುತ್ತಾರೆ? ಅದರಲ್ಲೂ ಬಡ ಹೆಣ್ಣುಮಕ್ಕಳಾಗಿ ಹುಟ್ಟಿ ಮಿಲ್ಲಿನಲ್ಲಿ ಕೂಲಿ ಕೆಲಸಕ್ಕೆ ಸೇರಿದವ ರನ್ನು ಹಿಂದಿನ ಜನ್ಮದಲ್ಲಿ ಪಾಪ ಮಾಡಿದವರೆಂದೇ ಹೇಳಬಹುದು.

ದೇವಾನಿಯು ಕೆಲವು ದಿನ ಎಲ್ಲವನ್ನೂ ಸಹಿಸಿದಳು. ಮೇಲೆ ದೇವ ರೆಲ್ಲಿ, ಯಾವುದೆಲ್ಲಿ ಎಂದು ಮೇಸ್ತ್ರಿಯ ನಡತೆಯನ್ನು ಎದುರಿಸದೆ ಬಿಟ್ಟಳು. ಮನಸ್ಸನ್ನು ಸವರಿಸಿಕೊಂಡು ಅವನೊಡನೆ ನಗುನಗುತ್ತ ಮಾತನಾಡ ಲಾರಂಭಿಸಿದಳು. ಬರಬರುತ್ತ ಅದರಲ್ಲಿ ಅವಳು ಸಂತೋಷವನ್ನೂ ಅನು ಭವಿಸಿದಳು. ಕೂಲಿಯೂ ಹೆಚ್ಚಿತು.

ಹಲವು ತಿಂಗಳು ಕಳೆದುವು. ದೇವಾನಿಗೆ ಶರೀರದಲ್ಲಿ ತೊಂದರೆಗಳು ತಲೆದೋರಿದವು. ತನಗೆ ಗರ್ಭ ಉಂಟಾಗಿರುವುದಾಗಿ ಅವಳು ತಿಳಿದಳು. ತನಗೆ ಗೊತ್ತಿದ್ದ ದೇವರುಗಳಿಗೆಲ್ಲಾ ಅವಳು ಹರಕೆ ಮಾಡಿಕೊಂಡಳು. 'ಯಾರ ಹತ್ತಿರ ಹೇಳಿಕೊಳ್ಳಲಿ!' ಎಂದು ಅವಳು ಕಾಡಿನಲ್ಲಿ ಬೇಟೆ ಗಾರನ ಕೈಯಿಂದ ತಪ್ಪಿಸಿಕೊಂಡು ಓಡುವ ಚಿಗರಿಯ ಹಾಗೆ ಭಯ ದಿಂದ ದಿಗ್ಭ್ರಮೆಗೊಂಡಳು. ಸಹೋದರನಾದ ವೈಯಾಪುರಿಯ ಬಳಿ ಹೇಳಲು ಅಂಜಿದಳು. ಅವಳ ಜೊತೆಯಲ್ಲಿ ಕೆಲಸ ಮಾಡುತ್ತಿದ್ದ ಹಲವರು ಅವಳ ಸ್ಥಿತಿಯನ್ನು ಅರಿತು ನಗುತ್ತ ಹಾಸ್ಯಮಾಡಲಾರಂಭಿಸಿದರು.

ಊರಿಗೆ ಹೋಗೋಣವೆ ಎಂದು ಯೋಚಿಸಿದಳು. ಆದರೆ ಅಲ್ಲಿ ಜಾತಿಯಿಂದ ಬೇರೆ ಮಾಡುತ್ತಾರಲ್ಲ ಎಂಬ ಭಯ. ತಾಯಿಗೆ ತಿಳಿದರೆ

ಅವಳು ಹೇಗೆ ಸಹಿಸುವಳು ಎಂಬುದು ಬೇರೆ. ಊರಿಗೆ ಹೊರಡುವ ಯೋಚನೆಯನ್ನು ಬಿಟ್ಟಿದ್ದಾಯಿತು. ದೇವರೇ ಗತಿ ಎಂದು ಧೈರ್ಯ ವನ್ನು ತಂದುಕೊಂಡು ಆ ಸ್ಥಿತಿಯಲ್ಲಿಯೇ ಮಿಲ್ಲಿನಲ್ಲಿ ಕೆಲಸ ಮಾಡತೊಡ ಗಿದಳು.

ಒಂದು ದಿನ ಪುನಃ ಮನಸ್ಸು ನಡುಗಿತು. 'ಅಯ್ಯೋ ನಾನು ಏನು ಮಾಡಿದೆ? ನನ್ನ ಕುಲವನ್ನು ಕೆಡಿಸಿದೆನಲ್ಲ' ಎಂದು ಒಬ್ಬಳ ಹತ್ತಿರ ಅಳುತ್ತ ಹೇಳಿಕೊಂಡಳು.

'ಭಯಪಡಬೇಡ ದೇವಾನಿ, ಇದೇನು ಎಲ್ಲರಿಗೂ ಆಗುವುದು ತಾನೇ? ಇದಕ್ಕೆ ಔಷಧಿಯಿರುವುದು' ಎಂದಳು ಅವಳು.

'ಹೌದು ನಾನು ಕೇಳಿಬಲ್ಲೆ. ಆದರೆ ಭಯವಾಗಿದೆ. ಪ್ರಾಣ ಹೋಗಿಬಿಡುವುದೊ ಏನೊ? ದೇವರೆ! ನಾನು ಎಲ್ಲಿ ಹೋಗಿ ಮುಚ್ಚಿಟ್ಟು ಕೊಳ್ಳಲಿ!' ಎಂದು ವ್ಯಸನಪಟ್ಟಳು.

'ಎರಡು ರೂಪಾಯಿ ಕೊಟ್ಟರೆ ಸಾಕು. ಮುತ್ತು ಸಾಮಿಆಚಾರಿ ಬೀದಿಯಲ್ಲಿ ಒಬ್ಬ ಹೆಂಗುಸು ಇದಾಳೆ. ಅವಳು ಎಲ್ಲಾ ಮಾಡುತ್ತಾಳೆ' ಎಂದು ಅವಳು ಹೇಳಿದಳು.

'ಪೋಲೀಸಿನವರಿಗೆ ತಿಳಿದುಬಿಟ್ಟರೆ ಹಿಡಿದುಕೊಂಡು ಹೋಗುವ ರಂತಲ್ಲಾ?' ಎಂದಳು ದೇವಾನಿ.

'ಅದಕ್ಕೆಲ್ಲಾ ಭಯಪಡಬೇಡ. ಆ ಹೆಂಗುಸಿಗೂ ಪೋಲೀಸಿನವ ರಿಗೂ ಬಹಳ ಸ್ನೇಹ. ರೂಪಾಯಿಯೇ ಎಲ್ಲವನ್ನೂ ಮಾಡುತ್ತದೆ. ನಿನಗೆ ಗೊತ್ತಿಲ್ಲವೆ?' ಎಂದಳು ಅವಳು.

'ಅಯ್ಯೊ, ನಾನು ರೂಪಾಯಿಗೆ ಎಲ್ಲಿ ಹೋಗಲಿ? ದೈವವೇ! ನನ್ನನ್ನು ಹೀಗೆ ಮರೆತೆಯಾ? ನಾನು ಈ ಹಾಳಾದ ಊರಿಗೆ ಏಕೆ ಬಂದೆನೊ? ಸೇಲಮ್ಮಿನಲ್ಲಿ ಅನ್ನಕ್ಕಿಲ್ಲದೆ ಸತ್ತಿದ್ದರೂ ಚೆನ್ನಾಗಿತ್ತಲ್ಲಾ!' ಎಂದು ಪ್ರಲಾಪಿಸಿದಳು.

‡ ‡ † ‡ ‡

ಕೆಲವು ದಿನಗಳು ಕಳೆದಮೇಲೆ ಮತ್ತೊಬ್ಬಳು ಬೇರೆಯೊಂದು ಸಲಹೆಯನ್ನು ಕೊಟ್ಟಳು. 'ಮಗುವನ್ನು ಸಾಯಿಸಬಾರದು. ಅಮ್ಮಾ! ಅದು ಮೂರು ಜನ್ಮಕ್ಕೂ ಹೋಗದ ಮಹಾಪಾಪವೆಂದು ಹೇಳುತ್ತಾರೆ. ಗಣಪತಿ ದೇವಸ್ಥಾನದ ಬಳಿ ಒಬ್ಬ ಮುದುಕಿಯಿದ್ದಾಳೆ. ಅವಳು ಬಹಳ ಒಳ್ಳೆಯವಳು. ಅವಳ ಹತ್ತಿರ ಹೋಗಿ ಇದ್ದುದೇ ಆದರೆ ಎಲ್ಲವನ್ನೂ ನೋಡಿಕೊಳ್ಳುತ್ತಾಳೆ. ನಿನ್ನಹಾಗೆ ಎಷ್ಟೊ ಜನರು ಅವಳ ಬಳಿ ಇದ್ದು ಮಗುವನ್ನು ಹೆತ್ತಿದ್ದಾರೆ. ನೀನು ಭಯಪಡಬೇಡ' ಎಂದಳು.

'ನೀನು ಮಹಾರಾಣಿಯಾಗುತ್ತಿ, ಅಕ್ಕಾ!' ಎಂದು ದೇವಾನಿಯು ಅವಳನ್ನು ಹರಸಿದಳು. ಆಮೇಲೆ ದೇವಾನಿಯು ಗಣಪತಿ ದೇವಸ್ಥಾನದ ಬೀದಿಯಲ್ಲಿರುವ ಆ ಪರೋಪಕಾರಿಣಿಯಾದ ಮುದುಕಿಯ ಮನೆಗೆ ಹೋಗಿ ಸೇರಿದಳು. ಕ್ರಮವಾಗಿ ಎಲ್ಲಾ ಆಯಿತು. ಮಗುವನ್ನು ಎತ್ತಿ ಕೊಳ್ಳುತ್ತಲೇ ದೇವಾನಿಗೆ ಪ್ರಪಂಚವೇ ಬದಲಾಯಿಸಿತು. ಮಗುವೇ ಒಂದು ಪ್ರಪಂಚವೆಂದು ತಿಳಿದಳು.

'ದೇವರು ಕೊಟ್ಟ ಮಗು; ಇದು ಏನು ಮಾಡೀತು? ಅಯ್ಯೋ ಪಾಪ! ನಾನು ತಾನೇ ಕುಲಪಾತಕಿ' ಎಂದು ಮಗುವನ್ನು ಎತ್ತಿಕೊಂಡು ಹಾಲುಣಿಸುತ್ತಿದ್ದಳು. ಹೀಗೆ ಕೆಲವು ದಿನ ಯೋಚನೆಗಳನ್ನೆಲ್ಲ ಮರೆತು ಕಾಲವನ್ನು ನೂಕಿದಳು.

'ನೀನು ಕೆಲಸಕ್ಕೆ ಈಗಲೇ ಹೋಗುವುದಕ್ಕೆ ಆಗುವುದಿಲ್ಲ, ದೇವಾನಿ! ಇಲ್ಲಿಯೇ ಇನ್ನೂ ಕೆಲವು ದಿನ ಇರು' ಎಂದು ಆ ಗಣಪತಿ ದೇವಸ್ಥಾನದ ಬೀದಿಯಲ್ಲಿರುವ ಮುದುಕಿ ಬಹಳ ಪರಿತಾಪದಿಂದ ಹೇಳಿದಳು.

'ಇಷ್ಟು ಒಳ್ಳೆಯವರು ಪ್ರಪಂಚದಲ್ಲಿರುವಾಗ ನಾನು ದೇವರನ್ನು ಹಾಗೆ ಅಂದೆನಲ್ಲಾ' ಎಂದು ದೇವಾನಿಯು ಭಗವಂತನನ್ನು ವಂದಿಸಿದಳು.

ಒಂದು ತಿಂಗಳನಂತರ ನಿಜಾಂಶವು ತಿಳಿಯಿತು. ಆ ಮುದುಕಿ ಗಂಡಸರಿಂದ ವಂಚಿಸಲ್ಪಟ್ಟ ಅನಾಥರಾದ ಹುಡುಗಿಯರನ್ನು ಒಳಿಯಲ್ಲಿ ಇಟ್ಟುಕೊಂಡು ಅಕ್ರಮ ನಡೆಯಿಸುವವಳು. ದೇವಾನಿಯೂ ಈ ಬಲೆಗೆ ಸಿಕ್ಕಿಬಿದ್ದಳು. ಮುಂದೆ ಅವಳು ಮಿಲ್ಲಿಗೆ ಹೋಗಲೇ ಇಲ್ಲ.

೫

'ಸೇಲಮ್ಮಿನಲ್ಲಿ ನಮ್ಮ ಮನೆಯಲ್ಲಿ ಕೆಲಸ ಮಾಡುತ್ತಿದ್ದ ದೇವಾನಿಯು ನಿನಗೆ ಜ್ಞಾಪಕವಿಲ್ಲವೆ? ಅವಳ ಹಾಗೆಯೇ ಇದ್ದಳು ಆ ತಿರುಕಳು' ಎಂದರು. ರಾಮನಾಥ ಅಯ್ಯರು.

ದೇವಾನಿಯು ಸೇಲಮ್ಮಿನಲ್ಲಿ ಮೊದಲು ಕೆಲಸ ಮಾಡುತ್ತಿದ್ದ ಮನೆಯ ಯಜಮಾನರಾದ ಪೆನ್‌ಷನ್ ಉದ್ಯೋಗಸ್ಥರ ಹಿರಿಯಮಗ ರಾಮನಾಥ ಅಯ್ಯರು. ಅವರಿಗೆ ಮದರಾಸಿನಲ್ಲಿ ಒಂದು ದೊಡ್ಡ ಬ್ಯಾಂಕಿನಲ್ಲಿ ಖಜಾನಜಿಯ ಕೆಲಸ.



'ಸೇಲಮ್ಮಿನ ಹುಡುಗಿ ಇಲ್ಲಿ ಏಕೆ ಇರುತ್ತಾಳೆ? ನಿಮಗೆ ಭ್ರಮೆ' ಎಂದಳು. ಸೀತಾಲಕ್ಷ್ಮಿ.

'ಏನೋ, ಹೇಗೊ. ಯಾರೇ ಆಗಿರಲಿ, ಮಗುನ್ನು ಎತ್ತಿಕೊಂಡು ಈ ರೀತಿಯಾಗಿ ಹೆಂಗಸರು ಭಿಕ್ಷವನ್ನು ಎತ್ತಬೇಕಾಯಿತಲ್ಲ; ನಮ್ಮ ದೇಶ ಯಾವ ಸ್ಥಿತಿಗೆ ಬಂತು!' ಎಂದರು ರಾಮನಾಥ ಅಯ್ಯರು.

'ನಿಮಗೆ ಯಾವಾಗಲೂ ದೇಶದ ಯೋಚನೆಯೆ. ನಿಮ್ಮ ಸಂಸಾರವನ್ನು ನೀವು ಗಮನಿಸಿದರೆ ಸಾಲದೆ?' ಎಂದಳು ಅಯ್ಯರರ ಹೆಂಡತಿ.

ಮರುದಿನ ಸಾಯಂಕಾಲವೂ ಸಹ ರಾಮನಾಥ ಅಯ್ಯರಿಗೆ ಆ ತಿರುಕಳ ನೆನಪು ಹೋಗಲಿಲ್ಲ. ಆಫೀಸಿನಿಂದ ಚೈನಾಬಜಾರಿಗೆ ನೆಟ್ಟಗೆ ಹೊರಟರು. ಅವಳನ್ನು ಆ ಸ್ಥಳದಲ್ಲಿ ನೋಡಬಹುದು, ಕಂಡು ವಿಚಾರಿಸೋಣ ಎಂದು ಬಗೆದು ಹಿಂದಿನ ದಿನದ ದಾರಿಯಲ್ಲೆ ಹೊರಟು ವಿಶ್ರಾಂತಿ ಗೃಹದ ಹತ್ತಿರ ಗಾಡಿಯನ್ನು ನಿಲ್ಲಿಸಿ ಸ್ವಲ್ಪ ಹೊತ್ತು ಕಾದಿದ್ದರು. ಅನೇಕ ಭಿಕ್ಷುಕರು ಬಂದು 'ಅಯ್ಯಾ ಅಯ್ಯಾ' ಎಂದು ಅವರನ್ನು ಬಳಸಿಕೊಂಡು ಹೋದರು. ಆದರೆ ಅವಳು ಕಣ್ಣಿಗೆ ಬೀಳಲಿಲ್ಲ.

ಮುಂದಿನ ಶನಿವಾರ ಸಾಯಂಕಾಲ ರಾಮನಾಥ ಅಯ್ಯರೂ ಅವರ ಹೆಂಡತಿಯೂ ಚೈನಾಬಜಾರಿನ ಮಾರ್ಗವಾಗಿ ಹೋಗುತ್ತಿದ್ದರು. 'ಅದೋ, ನಿಮ್ಮ ತಿರುಕಳು' ಎಂದಳು ಸೀತಾಲಕ್ಷ್ಮಿ.

ಮಗುವನ್ನು ಕಂಕುಳಲ್ಲಿ ಎತ್ತಿಕೊಂಡು 'ಅಮ್ಮಾ, ಒಂದು ಆಣೆ

ಕೊಡಿ. ಈ ಮಗುವನ್ನು ನೋಡಿ, ಅಮ್ಮಾ!' ಎಂದು ಬೇಡುತ್ತ ಸ್ವಲ್ಪ ದೂರದಲ್ಲಿ ಬಂದ ಬೇರೊಂದು ಮೋಟಾರ್ ಗಾಡಿಯ ಬಳಿಗೆ ಅವಳು ಅವಸರವಸರವಾಗಿ ಓಡಿದಳು.

'ರಾಮನಾಥ ಅಯ್ಯರರ ಗಾಡಿಯನ್ನು ಗುರುತು ಹಿಡಿದು ಅದರಲ್ಲಿರುವವರು ಏನೂ ಕೊಡುವುದಿಲ್ಲವೆಂದು ತಿಳಿದು ಅವಳು ಬೇರೆ ಗಾಡಿಯ ಬಳಿಗೆ ಹೋದಳು. ಭಿಕ್ಷುಕರಿಗೆ ಇದೆಲ್ಲ ಅನುಭವಕ್ಕೆ ಬಂದ ಸಂಗತಿ. ದೂರದಲ್ಲಿರುವ ತಿರುಕಳನ್ನು ಕೂಗಿ ಕರೆಯಲು ರಾಮನಾಥ ಅಯ್ಯರಿಗೆ ನಾಚಿಕೆಯಾಯಿತು. ಸ್ವಲ್ಪ ಹೊತ್ತು ಅವರು ಅಲ್ಲಿಯೇ ನಿಂತಿದ್ದರು. ಆ ಗಾಡಿಯ ಹತ್ತಿರ ಕೆಲಸ ಮುಗಿದಮೇಲೆ ಅವಳು ತಮ್ಮ ಹತ್ತಿರಕ್ಕೆ ಬರುವಳೆಂದು ಅವರು ತಿಳಿದರು. ಆದರೆ ಅವಳು ಗುಂಪಿನಲ್ಲಿ ಸೇರಿ ಹೋದವಳು ಪುನಃ ಕಾಣಬರಲಿಲ್ಲ.

'ಸರಿ, ಹೋಗೋಣ!' ಎಂದಳು ಸೀತಾಲಕ್ಷ್ಮಿ.

ಎಂಟು ದಿವಸ ಕಳೆದನಂತರ ರಾಮನಾಥ ಅಯ್ಯರೂ ಸೀತಾಲಕ್ಷ್ಮಿಯೂ ಸಿನಿಮಾಗೆ ಹೋದರು. ಕಥೆ ನಳೋಪಾಖ್ಯಾನ.

ಗೇಟಿನಲ್ಲಿ ಬಹಳ ಗಲಾಟೆ. ಹೊಸ ಅಭಿನೇತ್ರಿ ಟಿ. ಕೆ. ಭಾಗ್ಯಂ ದಮಯಂತಿಯ ವೇಷ.

'ಮುಂದಿನ ಆಟಕ್ಕೆ ಹೋಗಬಹುದು. ಈ ಆಟಕ್ಕೆ ಟಿಕೀಟು ಮುಗಿದು ಹೋದವು' ಎಂದರು ಜನ.

'ಮನೆಗೆ ಹೋಗಿಬರೋಣವೇ?' ಎಂದರು ರಾಮನಾಥ ಅಯ್ಯರು.

ಸೀತಾಲಕ್ಷ್ಮಿಯು ಉತ್ತರ ಹೇಳುವುದರೊಳಗೆ 'ಅಮ್ಮಾ! ಭಿಕ್ಷೆ ನೀಡಿರಿ' ಎಂದಳು ಒಬ್ಬ ತಿರುಕಳು.

ಸೇಲಮ್ಮನ ಹೆಂಗಸೇನೊ ಎಂದು ರಾಮನಾಥ ಅಯ್ಯರು ತಿರುಗಿ ನೋಡಿದರು. ಅವರಿಗೆ ಅದೇ ಹುಚ್ಚು. ಅವಳಲ್ಲ; ಬೇರೊಬ್ಬಳು.

'ಇಲ್ಲಿ ಗಾಡಿ ನಿಲ್ಲಿಸಿದರೆ ತಿರುಕರ ಅವಾಂತರ. ಮನೆಗೆ ಬಿಡು ರಾಮನ್ ನಾಯರ್' ಎಂದು ಹೇಳಿದಳು ಸೀತಾಲಕ್ಷ್ಮಿ ಡ್ರೈವರನಿಗೆ.

ಅದೇ ಸಮಯದಲ್ಲಿ ಒಬ್ಬ ಪೋಲೀಸಿನವನು ಲಾಠಿಯನ್ನು ಬೀಸಿ ಆ ತಿರುಕಳನ್ನು ಅಟ್ಟಿದನು.

*  *  *  *

ಆ ದಿನ ರಾತ್ರಿ ರಾಮನಾಥ ಅಯ್ಯರು ಕನಸಿನಲ್ಲಿ ತಿರುಕಳನ್ನು ಕಂಡರು.

'ನೀನು ದೇವಾನಿಯಲ್ಲವೆ? ನಿನ್ನದು ಯಾವ ಊರು?' ಎಂದು ಕೇಳಿದರು.

ಆಶ್ಚರ್ಯದಿಂದ ಕಣ್ಣುಗಳನ್ನು ಅರಳಿಸಿಕೊಂಡು ತನ್ನ ಮಗುವನ್ನು ತಬ್ಬಿಕೊಂಡು 'ಸ್ವಾಮಿ! ಸ್ವಾಮಿ! ನಿಮ್ಮದು ಸೇಲಂ ಅಲ್ಲವೆ? ಬೇವಿನ ಮರದ ಮನೆಯವರ ಮಕ್ಕಳಲ್ಲವೆ? ಎಂದಳು ತಿರುಕಳು.

'ನಾಯರ್, ಇವಳನ್ನು ಮೊದಲು ಹತ್ತಿಸಿಕೊ' ಎಂದು ಮೋಟಾರ್ ಡ್ರೈವರನಿಗೆ ಹೇಳಿದರು.

ಮನೆಗೆ ಹೋದೊಡನೆಯೇ 'ಇವಳು ಯಾರು? ಈ ಶನಿಯನ್ನು ಮನೆಗೆ ಏಕೆ ಕರೆದುಕೊಂಡು ಬಂದಿರಿ' ಎಂದಳು ಅವರ ಹೆಂಡತಿ.

'ನಮ್ಮ ಮನೆಯಲ್ಲಿ ಇವಳನ್ನು ನಾವು ಕೆಲಸಕ್ಕೆ ಏಕೆ ಇಟ್ಟು ಕೊಳ್ಳಬಾರದು. ಅನ್ನ ಹಾಕಿ ನಾಲ್ಕು ರೂಪಾಯಿ ಸಂಬಳ ಕೊಡೋಣ' ಎಂದರು.

'ಒಳ್ಳೆ ಕೆಲಸ ಮಾಡಿದಿರಿ. ಕೆಟ್ಟು ಹೋದವರನ್ನು ತಂದು ಮನೆ ಯಲ್ಲಿ ಸೇರಿಸಿಕೊಳ್ಳುವುದೆ? ಒಳ್ಳೇ ಬುದ್ಧಿವಂತಿಕೆ! ಹೋಗು, ಆಚೆ!' ಎಂದಳು ಸೀತಾಲಕ್ಷ್ಮಿ.

'ನಾನು ಕದಿಯುವುದಿಲ್ಲ, ಅಮ್ಮಾ! ನೀವು ಹೇಳಿದ ಕೆಲಸ ಮಾಡು ತ್ತೇನೆ, ಅಮ್ಮಾ!' ಎಂದಳು ತಿರುಕಳು.

'ಆಗುವುದಿಲ್ಲ, ಹೋಗು ಆಚೆ' ಎಂದಳು ಸೀತಾಲಕ್ಷ್ಮಿ.

ಒಂದು ರೂಪಾಯಿಯನ್ನಾದರೂ ಕೊಟ್ಟು ಕಳುಹಿಸೋಣವೆಂದು ರಾಮನಾಥ ಚೀಲವನ್ನು ತೆಗೆಯಹೋದರು. ಚೀಲವು ಜೇಬಿನಲ್ಲಿರಲಿಲ್ಲ.

ಹುಡುಕಿ ಹುಡುಕಿ ಅಲೆದರು. ತಿರುಕಳ ಮಗುವು ಗಟ್ಟಿಯಾಗಿ ಅಳ ಲಾರಂಭಿಸಿತು....ಎಚ್ಚರಗೊಂಡರು....ಕನಸು! ತಮ್ಮ ಮಗು ರಾಧ ಹಾಸಿಗೆಯಲ್ಲಿ ಕುಳಿತುಕೊಂಡು ಅಳುತ್ತಿತ್ತು.

'ಒಳ್ಳೆಯದಾಯಿತು. ಸೀತಾಲಕ್ಷ್ಮಿಯು ನಿಜವಾಗಿಯೂ ಇಷ್ಟು ಕ್ರೂರಳಾಗಿ ಇರಲಾರಳು; ಕನಸು ತಾನೆ!' ಎಂದು ರಾಮನಾಥ ಅಯ್ಯರು ಸಂತೋಷಪಟ್ಟರು.

* * * *

ಆನಂತರ ರಾಮನಾಥ ಅಯ್ಯರು ಅಂಗಡಿ, ರೈಲ್ವೆ ಸ್ಟೇಷನ್, ಸಿನಿಮಾ ಮಂದಿರ, ಎಲ್ಲೆಲ್ಲೋ ಹುಡುಕಾಡುತ್ತಲೇ ಇದ್ದರು. ಆದರೆ ಆ ತಿರುಕಳು ಮಾತ್ರ ಎಲ್ಲೂ ಕಣ್ಣಿಗೆ ಬೀಳಲಿಲ್ಲ. ಅವಳು ಏನಾದಳೋ ಯಾರಿಗೆ ಗೊತ್ತು?



# ಕಲಾಕಾರನ ತ್ಯಾಗ

**ಶ್ರೀಮಾನ್ ಜಗನ್ನಾಥ ಅಯ್ಯರು** ತಮಿಳು ಸಾಹಿತ್ಯಕ್ಷೇತ್ರದಲ್ಲಿ ದೊಡ್ಡ ಜವಾಬ್ದಾರಿಯನ್ನು ಹೊತ್ತಿರುವ ವ್ಯಕ್ತಿ. 'ಕಲೈ ಮಹಳ್' ಎಂಬ ಪತ್ರಿಕೆಯ ಸಂಪಾದಕರಾಗಿದ್ದಾರೆ. ಉಚ್ಚ ಸಾಹಿತ್ಯಕ್ಕೆ ಈ ಪತ್ರಿಕೆಯು ಮೀಸಲಾಗಿದೆ. ಪ್ರೌಢಶೈಲಿಯ ಬರೆವಣಿಗೆಗೆ ಮಾತ್ರ ಅದರಲ್ಲಿ ಎಡೆ. ಅಯ್ಯರು ತಮ್ಮ ಕರ್ತವ್ಯಭಾರವನ್ನು ಬಹಳ ಯಶಸ್ವಿಯಾಗಿ ನಡೆಯಿಸುತ್ತ ಬಂದಿದಾರೆ.

ಸಾಹಿತ್ಯಭೂಮಿಯಲ್ಲಿ ಅಯ್ಯರು ತುಳಿಯದ ಮಾರ್ಗವಿಲ್ಲ. ಲೇಖನ, ಕತೆ, ಕವಿತೆ, ಎಲ್ಲದರಲ್ಲೂ ಕೌಶಲ್ಯವನ್ನು ತೋರಿಸಿದ್ದಾರೆ. ಪತ್ರಿಕಾ ಸಂಪಾದನೆ ಇದ್ದೇ ಇದೆ. ಇದೆಲ್ಲಕ್ಕಿಂತ ಮಿಗಿಲಾದುದು ಇವರ ಪ್ರಾಚೀನ ಗ್ರಂಥಗಳ ಸಂಶೋಧನಕಾರ್ಯ.

'ಕಲಾಕಾರನ ತ್ಯಾಗ'ವು ಕಲೆಯ ಆದರ್ಶಕ್ಕೆ ಒಂದು ನಿದರ್ಶನ. ಕಲೆಯ ವಿಚಾರದಲ್ಲಿ ಇರುವ ಎರಡು ಅಭಿಪ್ರಾಯಗಳನ್ನು ವಿಮರ್ಶಿಸಲು ಒಂದು ಸೂಕ್ಷ್ಮಮಾರ್ಗ ಹಿಡಿದಿದ್ದಾರೆ ಇದರಲ್ಲಿ. ಅದೇ ಕಲೆಯ ಮರ್ಮ.

ನಾರಾಯಣ ಪಿಳ್ಳೆ ಎಪ್ಪತ್ತು ವರ್ಷದ ಮುದುಕ. ಅವನ ಹಣೆಯ ಮೇಲೆ ವಯಸ್ಸಿನ ಗೆರೆಗಳು ಎದ್ದು ಕಾಣುತ್ತಿದ್ದವು. ಯೌವನದ ಕಲ್ಲುಮೈ ಕರಗಿತ್ತು; ಪುಷ್ಟಿಯ ಗುರುತುಗಳು ಮಾಯವಾಗಿದ್ದವು. ಕೆನ್ನೆಗಳು ಒಳಗೆ ಹೋಗಿದ್ದವು. ಆದರೂ ಅವನ ಕೈಯ ಆ ಹಳೆಯ ಕೌಶಲವು ಇನ್ನೂ ಪೂರಾ ಹೋಗಿರಲಿಲ್ಲ; ಮಣ್ಣಿನಿಂದ ಅಪೂರ್ವವಾದ ಸುಂದರ ರೂಪಿನ ಆಕೃತಿಗಳನ್ನು ಸೃಷ್ಟಿಮಾಡುವ ಅವನ ಕಲಾಶಕ್ತಿಯು ನಷ್ಟವಾಗಿರಲಿಲ್ಲ. ಅದು ಅವನ ಕೈಬೆರಳುಗಳೊಡನೆ ಹುಟ್ಟಿಬಂದಂತಿತ್ತು.

ಮಣ್ಣನ್ನು ಸುಮ್ಮನೆ ಗುಂಡಗುಂಡಗೆ ಮಾಡಿ ಅದಕ್ಕೆ ಬಣ್ಣ ಹಚ್ಚಿದರೆ ಸಾಕು ಅದಕ್ಕೆ ಒಂದು ಬಗೆಯ ಜೀವಕಳೆ–ಶೋಭೆ–ಬಂದುಬಿಡುತ್ತಿತ್ತು. ಇದೇ ಅವನ ಯಕ್ಷಿಣೀ ವಿದ್ಯೆ. ಪಣ್ಣುರುಟ್ಟಿಯಲ್ಲಿ ಅವನು ಮಾಡಿದ ಗೊಂಬೆಗಳಿಗೆ ಬಹಳ ಗಿರಾಕಿ.

‡ ‡ ‡ ‡ ‡

ಮುರುಗನು ಗೊಂಬೆಯ ಮುದುಕನ ಸಾಕುಮಗ. ಮುದುಕನಿಗೆ ಸ್ವಂತ ಮಗನೂ ಒಬ್ಬ ಇದ್ದ. ಅವನ ಹೆಸರು ಕೃಷ್ಣ.

ಕೃಷ್ಣನು ಸ್ವಭಾವತಃ ಒಳ್ಳೆಯ ಹುಡುಗ. ತನ್ನ ಮುದಿ ತಂದೆಯ ಬೆಲೆ ಏನೆಂಬುದೂ ಅವನ ಕಲಾಕೌಶಲ ಎಂಥದೆಂಬುದೂ ಅವನಿಗೆ ಚೆನ್ನಾಗಿ ತಿಳಿದಿತ್ತು. ಅದೇ ಕಲೆಯನ್ನು, ಆ ವೃತ್ತಿಯನ್ನು ಅವನು ಅಭ್ಯಾಸ ಮಾಡಿದ. ಆದರೆ ಅವನು ಆ ವೃತ್ತಿಯನ್ನೇನೋ ಕಲಿತ; ಕಲಾಕೌಶಲವನ್ನಲ್ಲ. ಅವನೂ ಗೊಂಬೆಗಳನ್ನು ಮಾಡಿದ; ಅವುಗಳನ್ನು ಮಾರಿದ; ಹಣವನ್ನು ಗಳಿಸಿದ. ಆದರೆ ಆ ಗೊಂಬೆಗಳಲ್ಲಿ ಆ ಜೀವಕಳೆ ಎಲ್ಲಿಂದ ಬರಬೇಕು? ಅವೆಲ್ಲವೂ ಒಂದೇ ಅಚ್ಚಿನಲ್ಲಿ ತಯಾರಾದಂತೆ ಕಾಣುತ್ತಿದ್ದವು. ಅದೇ ಮಣ್ಣು, ಅದೇ ಬಣ್ಣ, ಆದರೆ ಅವನ ಕೈಗಳಲ್ಲಿ ಹರಿಯುತ್ತಿದ್ದ ರಕ್ತ ಮಾತ್ರ ಸಾಮಾನ್ಯ ಮನುಷ್ಯರದು, ಕಲಾಕಾರನದಲ್ಲ.

ಮುದುಕನಿಗೆ ಆಗಾಗ ತನ್ನ ಹುಡುಗನಲ್ಲಿದ್ದ ದೌರ್ಬಲ್ಯವನ್ನು ಕಂಡು, ಅವನಲ್ಲಿ ಕಲಾಕೌಶಲವಿಲ್ಲದ್ದನ್ನು ಯೋಚಿಸಿ ದುಃಖವಾಗುತ್ತಿತ್ತು. ವೃದ್ಧ ಕಲಾಕಾರನು ಇದೇ ಚಿಂತೆಯಲ್ಲಿ ಕ್ಷೀಣವಾಗುತ್ತಿದ್ದ.

ಹೊಟ್ಟೆಗೆ ಸಂಪಾದಿಸಿದ ಮಾತ್ರಕ್ಕೆ ಏನಾಯಿತು? ಮಣ್ಣಿನ ಗೊಂಬೆಗಳನ್ನು ಮಾಡಿ ಕುರುಡು ಕಾಸಿಗೆ ಮಾರಿಬಿಟ್ಟರೆ ಏನಾದಂತೆ? ಕೊಳ್ಳುವವರ ಮನಸ್ಸೇ ಗೊಂಬೆಯ ಬೆಲೆ. ಅವರ ಮನಸ್ಸನ್ನು ಒಲಿಸಿಕೊಂಡು ಅವರು ಗೊಂಬೆಗಳನ್ನು ಕೊಂಡುಕೊಳ್ಳುವಹಾಗೆ ಮಾಡುವುದೇ ಕಲಾಕಾರನ ಕರ್ತವ್ಯ!

ಕೃಷ್ಣನಿಗೆ ಮೂವತ್ತು ವರ್ಷ ವಯಸ್ಸಾಯಿತು. ಆಗ ಅವನು ಕಲಾಕಾರನಾಗುವುದು ಕನಸಿನಲ್ಲೂ ಆಗದ ಮಾತಾಯಿತು. ಮುದಿ ಕಲಾಕಾರನು ತನ್ನ ಪರಂಪರೆಯು ಕೊನೆಗಂಡಿತೆಂಬ ಚಿಂತೆಯಲ್ಲಿ ತೊಳಲುತ್ತಿದ್ದನು.

*　　*　　*　　*　　*

ಮುರುಗನು ಆ ಮುದಿಜೀವವನ್ನು ಚಿಂತಾಸಮುದ್ರದಲ್ಲಿ ಮುಳಗಿ ಹೋಗುವುದರಿಂದ ಉಳಿಸಿದ. ಅವನಿಗೆ ನಂಬಿಕೆ ಹುಟ್ಟಿಸಿದ. ಅವನು ಎಳೆಗರುವಿನಂತೆ ನೆಗೆಯುತ್ತಾ ಜಿಗಿಯುತ್ತಾ ಬಂದ. ಅವನ ಕೈಬೆರಳುಗಳು ವಸಂತದ ಗಾಳಿಯಲ್ಲಿ ಅಲುಗಾಡುವ ತಳಿರಿನಂತೆ ಆಡುತ್ತಿದ್ದವು. ಅವನು ಮುದುಕನಿಗೆ ಶಿಷ್ಯನಾದ. ಕೂಲಿಹಣ ಬೇಕಿಲ್ಲ, ಸುಮ್ಮನೆ ಊಟಹಾಕಿ ಕೆಲಸ ಕಲಿಸಿದರೆ ಸಾಕು ಎಂದು ಹೇಳಿ ಅವನು ಗುರುವಿಗೆ ಶರಣಾಗತನಾದ. ಅವನ ಮುಖದಲ್ಲಿ ಚಟುವಟಿಕೆ ಮಿನುಗುತ್ತಿತ್ತು. ನಾರಾಯಣಪಿಳ್ಳೆಯು ಅವನನ್ನು ಸ್ವೀಕರಿಸಿದನು. ಅಂದಿನಿಂದ ಇಂದಿಗೆ ಹತ್ತು ವರ್ಷಗಳಾದವು. ಅವನಿರುವುದು ಮುದಿ ಕಲಾಕಾರನ ಜೊತೆಯಲ್ಲಿ. ದಿನದಿನಕ್ಕೂ ಅವರ ಪರಸ್ಪರ ಪ್ರೀತಿಯು ಹೆಚ್ಚುತ್ತಿದೆ. ತನ್ನ ಕಲೆಯನ್ನು ಪ್ರಪಂಚದಲ್ಲಿ ಶಾಶ್ವತಗೊಳಿಸಲು ಭಗವಂತನು ಇದ್ದಕ್ಕಿದ್ದ ಹಾಗೆ ಒಂದು ಸಾಧನವನ್ನು ತಂದುಕೊಟ್ಟಿರುವುದಾಗಿ ಮುದುಕನಿಗೆ ನಂಬಿಕೆ ಬಂತು. ಮುರುಗನು ಮುದುಕನನ್ನು ತಂದೆಯೆಂದೇ ತಿಳಿದಿದ್ದನು. ಅವನನ್ನು ಅಪ್ಪ ಎಂದೇ ಕರೆಯುತ್ತಿದ್ದ. ಈಗ ಅವನು ಆ ಮನೆಯವನೇ ಆಗಿ ಹೋದ.

ಕೃಷ್ಣನ ತಿಳಿಯಾದ ಮನಸ್ಸಿನಲ್ಲಿ ಸ್ವಲ್ಪ ದೋಷ ಸೇರಿದಂತಾಯಿತು. ಅವನು 'ಈ ಪಾಪಿ ಎಲ್ಲಿಂದ ಬಂದನೊ? ಮೊದಲು ನನಗೆ ಕೂಲಿ

ಹಣ ಬೇಡ, ಊಟ ಹಾಕಿದರೆ ಸಾಕು ಕೆಲಸ ಮಾಡುತ್ತೇನೆ ಎಂದು ಬಂದ. ಈಗ ನಮ್ಮ ತಂದೆಯನ್ನು ಅಪ್ಪನನ್ನಾಗಿ ಮಾಡಿಕೊಂಡುಬಿಟ್ಟಿದ್ದಾನೆ. ಈ ಮುದುಕನೂ ಇವನನ್ನು ಆಕಾಶಕ್ಕೇರಿಸತೊಡಗಿದ್ದಾನೆ. ನನಗಿಂತ ಇವನನ್ನು ಕಂಡರೆ ಎಷ್ಟು ಅಪಾರ ವಾತ್ಸಲ್ಯ! ಇದರ ಪರಿಣಾಮವೇನು? ಈ ಮಾತು ಎಲ್ಲಿಯ ವರೆಗೆ ಹೋಗಬಹುದು ಎಂಬುದೇ ತಿಳಿಯದಾಗಿದೆ' ಎಂದು ಯೋಚಿಸಿದ. ಅಸೂಯೆಯ ಕಿಚ್ಚಿನ ಒಂದು ಕಿಡಿ ಅವನ ಹೃದಯದಲ್ಲಿ ಬಿತ್ತು. ಕಲಾಶಕ್ತಿವಿಹೀನವಾದ ಮನಸ್ಸಿನ ದೌರ್ಬಲ್ಯವು ಆ ಕಿಡಿಯು ಹೊತ್ತಿಕೊಳ್ಳುವುದಕ್ಕೆ ತುಪ್ಪದಂತೆ ಇತ್ತು.

ಮುರುಗನು ಕೆಲಸ ಕಲಿಯಲು ಬಂದಿದ್ದನು; ಆದರೆ ಅವನು ಕಲೆಯನ್ನು ಒಲಿಸಿಕೊಂಡ. ಅವನ ಕೈಗಳು ಮುದುಕನ ಕೈಗಳಿಗಿಂತ ಚುರುಕಾಗಿ ಆಡತೊಡಗಿದವು. ಮುದಿ ಕಲಾಕಾರನ ಬಳಿ ಒಂದು ಅಕ್ಷಯ ಕಲ್ಪನಾಭಂಡಾರವಿತ್ತು. ಆದರೆ ಆ ಕಲ್ಪನೆಗಳಿಗೆ ರೂಪಕೊಡಲು ಅವನ ಬೆರಳುಗಳು ಅಸಮರ್ಥವಾಗಿ ಹೋಗಿದ್ದವು. ವಯೋಭಾರವು ಆ ಹಳೇ ಬಿಗಿತವನ್ನು ಸಡಲಿಸಿಬಿಟ್ಟಿತ್ತು. ಆದರೆ ಬುದ್ಧಿಗೆ ವಯಸ್ಸುಂಟೆ? ಅವನ ಕಲ್ಪನಾಶಕ್ತಿಯು ಕೊನೆಯ ಎಲ್ಲೆಯನ್ನು ಮುಟ್ಟಿತ್ತು. ಅವನ ಕಲ್ಪನೆಗಳು ಬರಿಯ ಸ್ವಪ್ನವಾಗಿ ಉಳಿಯದೆ ಪ್ರಕಾಶಕ್ಕೆ ಬರುವ ಸಮಯವು ಒದಗಿದಂತಾಯಿತು. ನವಯುವಕನಾದ ಮುರುಗನು ಮುದುಕನ ಹೃದಯದೊಡನೆ ತನ್ನ ಹೃದಯವನ್ನು ಕೂಡಿಸಿ ಕಲೆಯ ಸವಿಯನ್ನು ಕಂಡನು. ಆ ಹೃದಯದಲ್ಲಿ ಮೊಳೆತ ಕಲ್ಪನೆಗಳಿಗೆ ಈ ಕೈಗಳು ರೂಪವನ್ನು ಕೊಟ್ಟು ಕಣ್ಣೆದುರಿಗಿರಿಸಿದವು. ವೃದ್ಧನ ಕಲ್ಪನಾಬಿಂಬಗಳು ಮುರುಗನ ಕೈಗಳಲ್ಲಿ ನಿಜವಾದ ಮೂರ್ತಿಗಳ ರೂಪವಾಗಿ ಪ್ರಕಟವಾಗುತ್ತಿದ್ದವು. ವೃದ್ಧನು ಏನು ಯೋಚಿಸುವನೋ ಅದನ್ನೇ ಮುರುಗನು ಮಾಡುವನು. ವೃದ್ಧನು ಅವನನ್ನು ಹಾಗೆ ಪ್ರೀತಿಸುತ್ತಿದ್ದರೆ ಅದರಲ್ಲಿ ತಪ್ಪು ತಾನೇ ಏನು? ಆದರೆ ಶ್ರೀಮಾನ್ ಕೃಷ್ಣ ಪಿಳ್ಳೆಯು ಈ ಮಾತುಗಳನ್ನು ಅಸೂಯಾಗ್ನಿಯ ಹೊಗೆಯಿಂದ ಕೊಳಕಾದ ಕಣ್ಣುಗಳಿಂದ ಹೇಗೆ ನೋಡಬಲ್ಲರು?

೨

ನವರಾತ್ರಿಯು ಹತ್ತಿರವಾಗುತ್ತಿತ್ತು. ನಾರಾಯಣ ಪಿಳ್ಳೆಯ ಗೊಂಬೆಗಳು ಚೆನ್ನಾಗಿ ಮಾರಾಟವಾಗುತ್ತಿದ್ದವು. ಮುರುಗನ ಗೊಂಬೆಗಳು ಹೆಚ್ಚು ಬೆಲೆಗೆ ಹೋದವು. ಮದರಾಸಿನಿಂದ ಒಟ್ಟು ಐನೂರು ರೂಪಾಯಿಗಳಿಗೆ ಗಿರಾಕಿ ಬಂದಿತ್ತು. ಮನೆಯಲ್ಲಿ ಎಲ್ಲರೂ ಗೊಂಬೆಗಳನ್ನು ಮಾಡುವುದರಲ್ಲಿ ತೊಡಗಿದ್ದರು. ಮುದುಕನೂ ಕೆಮ್ಮುತ್ತ ತನ್ನ ಕೈಲಾದಮಟ್ಟಿಗೂ ಗೊಂಬೆಗಳನ್ನು ಮಾಡತೊಡಗಿದ. ಮುರುಗನೂ ಗೊಂಬೆಗಳನ್ನು ಮಾಡಿದನೆಂದು ಹೇಳಬೇಕಾಗಿಲ್ಲ. ಕೃಷ್ಣನು ಹೆಚ್ಚು ಕೆಲಸ ಮಾಡಿದನೆಂದು ಹೇಳಲಿಕ್ಕಾಗುವುದಿಲ್ಲ. ಹೌದು, ಅವನು ಕೆಲಸ ಮಾಡಿದ. ಮುದುಕನಿಗೆ ಗದರಿಕೆಯೂ ಆಯಿತು ಅವನ ಕೈಯಲ್ಲಿ.

ಕೃಷ್ಣನು ಪೆಟ್ಟಿಗೆಯನ್ನು ಸರಿಯಾಗಿ ಅಣಿಮಾಡಿಸಿ ಸ್ಟೇಷನ್ನಿಗೆ ಹೋಗಿ ಅದನ್ನು ಮದರಾಸಿಗೆ ಕಳುಹಿಸಿದನು. ಮುರುಗನೂ ಅವನೊಡನೆ ಸ್ಟೇಷನ್ನಿಗೆ ಹೋದ. ಮುರುಗನ ದೆಸೆಯಿಂದ ತಮಗೆ ಕೊಂಚ ಲಾಭ ಬರುತ್ತದೆಂದು ಭಾವಿಸಿ ಕೃಷ್ಣನ ಮನಸ್ಸು ತಣ್ಣಗಿದ್ದಿತು.

ಅವನು ಕೇಳಿದ ಮುರುಗನನ್ನು 'ತಮ್ಮ, ನೀನು ಮದುವೆ ಮಾಡಿಕೊಳ್ಳುವುದಿಲ್ಲವೆ?'

ಅವನ ಬಾಯಿಂದ ಇಂತಹ ಸವಿಯಾದ ಮಾತುಗಳು ಹೊರಡುವುದೆಂದು ಮುರುಗನು ಎಣಿಸಿರಲಿಲ್ಲ. ಮುರುಗನಿಗೆ ಅದು ಅಮೃತಧಾರೆಯಂತೆ ಅನಿಸಿತು. ಅವನ ಸಂತೋಷಕ್ಕೆ ಕಾರಣ ಮದುವೆಯ ಮಾತನ್ನೆತ್ತಿದ್ದು ಅಲ್ಲ, ಆ ತನ್ನ 'ಅಪ್ಪ'ನ ಪ್ರೇಮಪೂರ್ಣ ವ್ಯವಹಾರವೇ ಆಗಿತ್ತು.

'ಯಾವುದಾದರೊಂದು ಗುಣವತಿಯಾದ ಹೆಣ್ಣನ್ನು ತಂದು ಮದುವೆ ಮಾಡಬೇಕು ಎಂದು ತಂದೆಯವರು ಆಗಾಗ ಹೇಳುತ್ತಾರೆ' ಎಂದು ಕೃಷ್ಣನು ಹೇಳಿದನು.

ಮುರುಗನ ಮುಗುಳ್ನಗೆಯೊಡನೆ ನಾಚಿಕೆಯು ಕೂಡಿಕೊಂಡಿತು.

ಸ್ಟೇಶನ್ನಿನಿಂದ ಇಬ್ಬರೂ ಹಿಂತಿರುಗಿ ಬರುತ್ತಿದ್ದರು. ಸಂಜೆಯ ಹೊತ್ತು. ಅವರು ಬರುತ್ತಿದ್ದುದು ಅಂಗಡಿ ಬೀದಿ. ಇದ್ದಕ್ಕಿದ್ದಹಾಗೆ

ಯಾರೋ 'ಮುರುಗಾ! ಮುರುಗಾ! ಎಷ್ಟೊಂದು ದಿನಗಳು ನಿನ್ನನ್ನು ಹೀಗೆ ಹುಡುಕುತ್ತ ಅಲೆದೆ!' ಎಂದು ಗಟ್ಟಿಯಾಗಿ ಕೂಗಿದಂತಾಯಿತು. ಇಬ್ಬರೂ ಹಿಂದಕ್ಕೆ ತಿರುಗಿ ನೋಡಿದರು. ಕಪ್ಪಗೆ ಒಣಗಿದ ದೇಹ, ಕೈಯಲ್ಲಿ ಕಾಲ್ಮರಿ. ಕಣ್ಣೀರಿನಿಂದ ತೊಯ್ದ ಕಣ್ಣುಗಳುಳ್ಳ ಒಬ್ಬ ಮನುಷ್ಯ ಎದುರಿಗೆ ನಿಂತಿದ್ದಾನೆ. ಅವನು ಚಮ್ಮಾರ. ಜೋಡು ಹೊಲೆದೇ ಅವನು ಹೊಟ್ಟೆ ತುಂಬಿಕೊಳ್ಳುವುದು. ಪಣ್ಣುರುಟ್ಟಿಯಲ್ಲಿ ಅವನು ಒಂದು ವರ್ಷದಿಂದ ವಾಸವಾಗಿದ್ದ. ಅವನು ಚಮ್ಮಾರನೆಂಬುದು ಕೃಷ್ಣನಿಗೆ ಗೊತ್ತಿತ್ತು; ಆದರೆ ಮುರುಗನಿಗೆ ಗೊತ್ತಿರಲಿಲ್ಲ.

....ಮುರುಗನಿಗೆ ಗೊತ್ತಿರಲಿಲ್ಲವೆಂದು ಹೇಳುವುದು ಸರಿಯಲ್ಲ. ಕೃಷ್ಣನ ತಮ್ಮ ಮುರುಗನಿಗೆ ಅವನು ಯಾರೆಂಬುದು ತಿಳಿದಿಲ್ಲವಾದರೂ ಅದಕ್ಕೆ ಮೊದಲಿನ ಮುರುಗನಿಗೆ ಅವನು ಚೆನ್ನಾಗಿ ಗೊತ್ತು. ಅವನ ಮನಸ್ಸು ಹೇಳುತ್ತಿತ್ತು ಅವನು ತಿರುನಲ್ವೇಲಿಯವನೆಂದು.

ಇಬ್ಬರೂ ನಿಂತಿದ್ದರು. ಚಮ್ಮಾರನು ಓಡಿಬಂದ. ಮುರುಗನ ಮೈ ನಡುಗತೊಡಗಿತು. ಕೃಷ್ಣನಿಗೆ ಏನೂ ತೋಚಲಿಲ್ಲ.

'ಅಯ್ಯೋ! ನಿನ್ನನ್ನು ಅಗಲಿ ನಿನ್ನ ತಾಯಿ ಅದೇ ಚಿಂತೆಯಲ್ಲಿ ನವೆದು ಸತ್ತಳು. ನೀನು ನನ್ನೊಡನೆಯೇ ಇದ್ದಿದ್ದರೆ ಈ ಮುಂದಿತನದಲ್ಲಿ ನಾನೇಕೆ ಇಷ್ಟು ಕಷ್ಟಪಡಬೇಕಾಗಿತ್ತು' ಎಂದು ಆ ಮನುಷ್ಯನು ತೆಲುಗಿನಲ್ಲಿ ಗೋಳಿಟ್ಟನು. ತೆಲುಗೇ ಅವರ ಮನೆಮಾತು.

ಈ ನಾಟಕದ ದೃಶ್ಯದಂಥ ಸನ್ನಿವೇಶದ ಅರ್ಥ ಕೃಷ್ಣನಿಗೆ ಆಗಲಿಲ್ಲ. ಈ ಮಾತನ್ನು ಹೇಗೆ ನಂಬುವುದು? ಮುರುಗನು ಆ ಚಮ್ಮಾರನ ಹುಡುಗನೇ—?'

'ನೀನು ಏನು ಹೇಳುತ್ತಿದ್ದೀ' ಎಂದು ಕೃಷ್ಣನು ಅವನನ್ನು ಕೇಳಿದನು.

'ಅಯ್ಯೊ! ಅಯ್ಯೊ! ಅಪ್ಪ, ಇವನು ನನ್ನ ಹುಡುಗ. ಇವನಿಗಾಗಿ ನಾನೆಷ್ಟು ಕಷ್ಟಪಟ್ಟೆನೆಂಬುದು ನನಗೆ ಮಾತ್ರ ಗೊತ್ತು. ಇವನು ಇಲ್ಲೇ ಇದ್ದಾನೆಂಬುದು ನನಗೆ ತಿಳಿದಿರಲಿಲ್ಲ' ಎಂದು ಹೇಳಿ ಅವನು ಅಳತೊಡಗಿದನು. ವಾತ್ಸಲ್ಯದ ಧಾರೆಯು ತಡೆಯಿಲ್ಲದೆ ಹರಿದು ಹೊರಟಿತು.

ಸಂತೋಷವೂ ಪ್ರೇಮವೂ ಆದರಲ್ಲಿ ಕೂಡಿಕೊಂಡವು. ಇದರ ಪರಿಣಾಮ ವಾಗಿ ಮುರುಗನ ಮೇಲೆ ವಿಪತ್ತಿನ ಪರ್ವತವು ಬೀಳುವುದೆಂದು ಅವನಿಗೇನು ಗೊತ್ತು!

ಕೃಷ್ಣನಿಗೆ ಪಿಶಾಚ ಹಿಡಿದಂತಾಯಿತು. ಛತ್ರಿಯೇ ಅವನಿಗೆ ಆಯುಧವಾಯಿತು. ಪಾಪಿ! ಚಂಡಾಲ! ನಾಯೇ! ನನ್ನ ಕುಲವನ್ನು ಕೆಡಿಸಿದವನೆ! ಉತ್ತಮ ಕುಲದವನೆಂದು ಹೇಳಿ ನಮ್ಮನ್ನು ಹೀಗೆ ಸಿಲುಕಿಸಿದೆಯಾ, ದ್ರೋಹಿ!' .... ಅವನ ಹೊಟ್ಟೆಯುರಿ, ಕುಲದ ಗರ್ವ, ಮತ್ತು ಅವಮಾನದ ಭಾವನೆ ಎಲ್ಲಾ ಒಟ್ಟಿಗೆ ಸೇರಿದವು. ಬಾಯಿಂದ ಬೈಗಳ ಮಳೆ ಸುರಿಯಿತು. ಮುರುಗನನ್ನು ಹೊಡೆದು ಹೊಡೆದು ಛತ್ರಿಯು ಮುರಿದು ಹೋಯಿತು. ಅವನ ಶರೀರವು ರಕ್ತದಿಂದ ತೊಯ್ದು ಹೋಯಿತು. ಜನರು ಗುಂಪುಸೇರಿದರು.

ಜನರು ಈ ಮನಕರಗುವ ನೋಟದ ವಿಚಾರ ಮಾತನಾಡಿಕೊಳ್ಳುತ್ತಿದ್ದರು. ಮುರುಗನನ್ನು ಅರ್ಧ ಸತ್ತಹಾಗೆ ಮಾಡಿ ಆವೇಶದಿಂದ ಕೃಷ್ಣನು ಮನೆಯ ಕಡೆಗೆ ಓಡಿದನು. ಅವನು ತನ್ನ ಮುದಿ ತಂದೆಯನ್ನು ಒಂದೇ ಕ್ಷಣದಲ್ಲಿ ಕೊಂದುಹಾಕುವಷ್ಟು ಆತುರದಿಂದ ಬಂದ. ಅವನೇ ಅಲ್ಲವೇ ಈ ನೀಚನಿಗೆ ಮನೆಯಲ್ಲಿ ಆಶ್ರಯ ಕೊಟ್ಟವನು? ಇವನ ಮೇಲೆ ಎಷ್ಟು ವಾತ್ಸಲ್ಯ. ಅವನು ತನ್ನ ಮಗನನ್ನೂ ಲೆಕ್ಕಿಸಲಿಲ್ಲ. ಹೀಗೆಯೇ ಅಲ್ಲವೇ ಅವನಿಗಾಗಬೇಕು? ಭೇಷ್!—ಈರ್ಷ್ಯಾಗ್ನಿಯ ಜ್ವಾಲೆಯು ಇಂತಹ ವಿಚಾರಗಳಿಂದ ಎದ್ದಿತು. ಮುರುಗನ ಕಲಾಕೌಶಲ್ಯ, ಅವನಿಂದ ತನಗಾದ ಲಾಭ ಎಲ್ಲವನ್ನೂ ಅವನು ಮರೆತುಹೋದ. ಮುರುಗನು ಮಾಡಿದ ಈ ಮಹಾಪಾಪಕ್ಕೆ ತನ್ನ ತಂದೆಯೇ ನೆರವಾಗಿರಬೇಕೆಂದು ಅವನ ಊಹೆ. ಇನ್ನು ಮುಂದೆ ಮುದುಕನು ಈ ರೀತಿಯಾಗಿ ಅವನನ್ನು ಪ್ರೀತಿಸನು ಎಂದು ಮನಸ್ಸಿಗೆ ಸಮಾಧಾನ ತಂದುಕೊಂಡನು. ತನ್ನ ಹಳೆಯ ಹಗೆಯನ್ನು ಜಯಿಸಿ ಬಂದಹಾಗಿತ್ತು ಅವನಿಗೆ.

*　　*　　*　　*

ಚಮ್ಮಾರನು ತನ್ನ ಮಗನನ್ನು ಗುಡಿಸಿಲಿಗೆ ಒಯ್ದನು. ಅವನಿಗೆ

ಎಲ್ಲವೂ ತಿಳಿಯಿತು. 'ಅಯ್ಯೋ! ನಾನೆಂತಹ ಪಾಪಿ! ನನ್ನ ಹುಡುಗನ ಜೀವವನ್ನು ಮಣ್ಣುಗೂಡಿಸಿದೆನಲ್ಲಾ!' ಎಂದು ಅವನು ಗೋಳಿಟ್ಟನು. ಆದರೆ ಹೀಗೆ ಅಳುವುದರಿಂದ ಪ್ರಯೋಜನ ಏನಿತ್ತು?

† † † †

ಮುದುಕನು ಮುರುಗನನ್ನೂ ಮತ್ತು ಕೃಷ್ಣನನ್ನೂ ನಿರೀಕ್ಷಿಸಿಕೊಂಡು ಜಗುಲಿಯ ಮೇಲೆ ಕುಳಿತಿದ್ದ. ಕೃಷ್ಣನು ಬಂದವನೇ 'ಸಾಯಿ! ನೀನೇ ಆ ಪಾಪಿಯನ್ನು ಮನೆಗೆ ಸೇರಿಸಿದವನು! ಎಲ್ಲಾ ಹಾಳಾಯಿತು! ನೀನು ಈ ಕುಲಕ್ಕೆ ಕಳಂಕ ಹಚ್ಚಿದೆ' ಎಂದು ಗರ್ಜಿಸಿದನು.

'ಏನು? ಏನು ನಡೆಯಿತು!' ಎಂದು ಮುದುಕನು ಕೇಳಿದನು.

'ಏನು ನಡೆಯಿತೇ? ನಾನು, ನೀನು ಮತ್ತು ನಮ್ಮ ಮನೆಮಂದಿ ಎಲ್ಲರೂ ಕೆಟ್ಟರು! ಚಮ್ಮಾರ ಹುಡುಗ ಮನೆಯಲ್ಲಿ ಸೇರಿಹೋಗಿದ್ದ!' ಎಂದು ಕೃಷ್ಣನು ತಲೆ ಬಡಿದುಕೊಂಡು ಅಳತೊಡಗಿದನು.

ಮುದುಕನು ತನ್ನನ್ನು ತಾನು ಮರೆತನು. ಅವನು ಕಣ್ಣು ಮುಚ್ಚಿಕೊಂಡ. ಗಂಟಲು ಏರಿಬಂತು. ಪ್ರಜ್ಞೆಯು ಕಡಿಮೆಯಾಗುತ್ತ ಹೋಯಿತು.

೩

ಕೃಷ್ಣನು ಧನಿಕನಾಗಿದ್ದ. ಈ ಕಾರಣದಿಂದ ಅವನು ಪೂಜೆ ಪ್ರಾಯಶ್ಚಿತ್ತ ಮಾಡಿಸಿ ಪುನಃ ಜಾತಿಗೆ ಸೇರಿಕೊಂಡನು. ಅವನ ಮನಸ್ಸಿನಲ್ಲಿ ಈಗ ಒಂದೇ ಕೊನೆಯ ಆಸೆ ಉಳಿಯಿತು. ಮುರುಗನು ಅಲ್ಲಿ ಕಲಿತಿದ್ದ ಕೆಲಸದಿಂದ ಅವಶ್ಯವಾಗಿ ಹಣ ಗಳಿಸುವನು. ಆದುದರಿಂದ ಅವನ ಕೈಯನ್ನು ಕತ್ತರಿಸಬೇಕು, ಇಲ್ಲವೆ ಅವನು ಈ ಕೆಲಸವನ್ನು ಮಾಡದಂತೆ ಮಾಡಬೇಕು.

† † † †

ಬಡಪಾಯಿ ಮುದುಕನು ನಿರ್ಜೀವವಾದನು. ಅವನಿಗೆ ತನ್ನ ಪ್ರಾಣಕ್ಕೆ ಸಮವಾದ ಮುರುಗನು ಕಳೆದುಹೋದಂತಾಯಿತು. ಅವನ

ಮನಸ್ಸು ಮುರುಗನು ಪಾಪ ಮಾಡಿರುವುದಾಗಿ ಹೇಳುತ್ತಿತ್ತು. ಆದರೆ ಅವನ ಕಲಾಕಾರ ಹೃದಯ ಮುರುಗನನ್ನು ಕಳೆದುಕೊಂಡು ಚಿಂತೆಯಲ್ಲಿ ಮುಳುಗಿತ್ತು.

‡ ‡ ‡ ‡

ಮುರುಗನು ಸ್ವಲ್ಪೇ ದಿವಸಗಳಲ್ಲಿ ತನ್ನ ತಂದೆಯ ವೃತ್ತಿಯನ್ನು ಕಲಿತನು. ಅದರಲ್ಲಿ ಅವನು ನಿಪುಣನೂ ಆದನು.

ಆದರೂ ಅವನಿಗೆ ತನ್ನ 'ಅಪ್ಪ' ನನ್ನು ಬಿಟ್ಟು ಇರುವುದು ಕಷ್ಟ ವಾಗಿ ಕಂಡಿತು. ಈಗಲೂ ಅವನು ಗೊಂಬೆಗಳನ್ನು ಮಾಡುತ್ತಹೋದನು.

ಅವನ ತಂದೆಯು ಅವುಗಳನ್ನು ಮಾರುವಂತೆ ಹೇಳುತ್ತಿದ್ದ. ಆದ ರವನು 'ಅಪ್ಪನಿಗೆ ತೋರಿಸದೆ ಮಾರುವುದು ಸರಿಯಲ್ಲ. ಇವುಗಳನ್ನು ಮಾಡುವುದರಿಂದ ನನಗೆ ಎಷ್ಟೋ ಸಂತೋಷವಾಗುತ್ತದೆ!' ಎಂದು ಹೇಳುತ್ತಿದ್ದನು.

ತನ್ನ ಹುಡುಗನ ಈ ಕಲಾಪ್ರೇಮವು ತಂದೆಗೆ ಅರ್ಥವಾಗಲಿಲ್ಲ.

§ § § §

ಕೃಷ್ಣನು ತನಗೆ ಗುರುತುಪರಿಚಯವಿದ್ದ ಒಬ್ಬ ಚಮ್ಮಾರನೊಡನೆ ಮುರುಗನ ಗುಡಿಸಿಲ ಬಳಿಗೆ ಬಂದನು. ಅವನನ್ನು ವಿಶ್ವಾಸದಿಂದ ಸ್ವಾಗತಿಸಿ ಮುರುಗನು 'ಅಪ್ಪ–ತಂದೆಯವರು ಸೌಖ್ಯವಾಗಿದ್ದಾರಷ್ಟೆ?' ಎಂದು ಕೇಳಿದನು.

'ಸಾಕು ಮಾಡು ನಿನ್ನ ಈ ಕುಶಲಪ್ರಶ್ನೆಗಳನ್ನು. ನೀನು ಈವರೆಗೆ ಮಾಡಿರುವ ಗೊಂಬೆಗಳನ್ನೆಲ್ಲಾ ಹೊರಗೆ ತೆಗೆದಿಡು. ಇನ್ನು ಮುಂದೆ ನೀನು ಮಾಡುವುದನ್ನೆಲ್ಲ ನನಗೆ ಕೊಟ್ಟುಬಿಡಬೇಕು. ಆಣೆಯಿಡು'

ಮುರುಗನನ್ನು ಗಲ್ಲಿಗೆ ಒಯ್ದಿದ್ದರೂ ಇಷ್ಟು ದುಃಖ ಅವನಿ ಗಾಗದು. ಅಳುತ್ತಾ ಅಳುತ್ತಾ ಅವನು ಆಣೆಯಿಟ್ಟುಕೊಂಡ. ನನ್ನ ತಂದೆಯಾಣೆ. ನಾನು ಮಾಡುವ ಗೊಂಬೆಗಳನ್ನೆಲ್ಲ ನಿಮಗೇ ಕೊಟ್ಟು ಬಿಡುತ್ತೇನೆ.

ತನ್ನ ಹೃದಯವನ್ನೇ ಅರ್ಪಿಸುವ ರೀತಿಯಲ್ಲಿ ಅವನು ಕೃಷ್ಣನಿಗೆ ತಾನು ಮಾಡಿದ್ದ ಗೊಂಬೆಗಳನ್ನೆಲ್ಲಾ ಕೊಟ್ಟುಬಿಟ್ಟ. 'ಅಪ್ಪ' ಅವುಗಳನ್ನು ನೋಡುವರೆಂಬುದೊಂದೇ ಅವನಿಗೆ ಸಮಾಧಾನ. ಇದರಿಂದ ಅವನ ಉತ್ಸಾಹವೂ ಹೆಚ್ಚಿತು. ಅವನು ಮತ್ತೂ ಹೆಚ್ಚಾಗಿ ಗೊಂಬೆಗಳನ್ನು ಮಾಡಹತ್ತಿದನು.

† † † †

ಈರ್ಷ್ಯಾ ಪಿಶಾಚಿಯೇ! ನಿನ್ನ ಕಾರ್ಯಗಳು ಹೀಗೂ ಉಂಟೇನು? ಕೃಷ್ಣನು ಅಸೂಯೆಯ ಅವತಾರವೇ ಆಗಿದ್ದ. ಅವನು ಗೊಂಬೆಗಳನ್ನೆಲ್ಲ ದಾರಿಯಲ್ಲಿ ಬಂದು ಬಂಡೆಯ ಮೇಲೆ ಎಸೆದು ಒಡೆಯುತ್ತಿದ್ದ. ತನ್ನ ಕೈಯನ್ನು ಎತ್ತಿ, ಹಲ್ಲು ಕಡಿಯುತ್ತ ಆ ಗೊಂಬೆಗಳನ್ನು ಒಡೆದಾಗ ಅವನ ಮನಸ್ಸಿಗೆ ಒಂದು ಬಗೆಯ ತೃಪ್ತಿಯಾಗುತ್ತಿತ್ತು.

ಅವನು ಪ್ರತಿವಾರವು ತನ್ನ ಆಳಿನೊಡನೆ ಮುರುಗನ ಬಳಿಗೆ ಹೋಗಿ ಅವನಿಂದ ಗೊಂಬೆಗಳನ್ನು ತರಿಸಿ ಆ ಬಂಡೆಯ ಮೇಲೆ ಒಡೆದು ಹಾಕುತ್ತಿದ್ದ.

ತನ್ನ ಕಲಾಸೃಷ್ಟಿಯೆಲ್ಲವೂ ಅಸೂಯೆಯ ಬಲಿಪೀಠಕ್ಕೆ ಅರ್ಪಿತವಾಗುತ್ತೆಂದು ಮುರುಗನಿಗೆ ಪಾಪ, ಏನು ಗೊತ್ತು!

† † † †

ಮುರುಗನ ಚಿಂತೆಯಿಂದ ಮುದುಕನು ಶೀಘ್ರವಾಗಿಯೇ ಯಮರಾಜನ ದರ್ಶನಕ್ಕೆ ಹೋದನು. ಸಾಯುವಾಗ ಅವನು ಮುರುಗನ ವಿಚಾರವಾಗಿಯೇ ಯೋಚಿಸುತ್ತಿದ್ದ. ಅವನ ಕೊನೆಯ ಮಾತೂ 'ಮುರುಗ'ನೇ ಆಗಿತ್ತು.

ಅವನ ಮರಣವಾರ್ತೆಯನ್ನು ಕೇಳಿದಾಗ ಮುರುಗನಿಗೆ ತಾಯಿಯನ್ನು ಕಳೆದುಕೊಂಡ ಮಗುವಿನ ಸ್ಥಿತಿಯಾಯಿತು.

೪

ನಮಗೂ ಕಲಾಕಾರನಿಗೂ ಇದೇ ಭೇದ. 'ಅಪ್ಪ' ಸತ್ತುಹೋದ ಮೇಲೂ ಮುರುಗನ ಹೃದಯದಲ್ಲಿ ಆ ವೃದ್ಧನ ಮೂರ್ತಿ ಸ್ಥಿರವಾಗಿತ್ತು.

ಹೃದಯದಲ್ಲಿರುವ ಆ ಮೂರ್ತಿಯನ್ನು ಹೊರಗೆ ತಂದರೆ ಎಷ್ಟು ಚೆನ್ನಾಗಿರುತ್ತದೆ! ಈ ವಿಚಾರಮಾತ್ರದಿಂದ ಅಮೃತಧಾರೆಯು ಅವನ ತಲೆಯಿಂದ ಕಾಲಿನವರೆಗೆ ಹರಿಯಿತು. ಮುಖದ ಮೇಲೆ ಅಪೂರ್ವಶೋಭೆ ಕಾಣಿಸಿತು.

ರಾತ್ರಿಯೆಲ್ಲ ಅವನು ನಿದ್ರಿಸಲಿಲ್ಲ. ಅವನು 'ಅಪ್ಪ'ನ ಮೂರ್ತಿಯೊಂದನ್ನು ಮಾಡತೊಡಗಿದ. ಅವನು ಸ್ವಪ್ನದಲ್ಲೂ ಅವನನ್ನು ಕಂಡ. ಮಾರನೇದಿನ ಅದನ್ನು ಮಾಡಲು ಪ್ರಾರಂಭಿಸಿದ. ಸ್ವಲ್ಪಸ್ವಲ್ಪವಾಗಿ ಮಣ್ಣನ್ನು ಬಹಳ ಎಚ್ಚರಿಕೆಯಿಂದ ಕೈಗೆ ತೆಗೆದುಕೊಳ್ಳುತ್ತಿದ್ದ. ನಾಲ್ಕು ದಿನಗಳಲ್ಲಿ ಮಣ್ಣಿನ ಮೂರ್ತಿ ಸಿದ್ಧವಾಯಿತು. ಆಗ ಅದಕ್ಕೆ ಬಣ್ಣ ಹಚ್ಚಲು ಪ್ರಾರಂಭಿಸಿದ. ಕಾಲುಮರೆಯನ್ನು ಮಾರಿದ್ದರಿಂದ ಸ್ವಲ್ಪ ಹಣವೂ ಸಿಕ್ಕಿತ್ತು. ಇದರ ಜೊತೆಗೆ ತನ್ನ ತಂದೆಯಿಂದಲೂ ಸ್ವಲ್ಪ ಹಣ ತೆಗೆದುಕೊಂಡ. ಒಳ್ಳೆಯ ಬಣ್ಣವನ್ನು ಕೊಂಡುಕೊಂಡು ಬಂದ; ಮೂರ್ತಿಗೆ ಅಣು ಅಣುವಿಗೂ ಬಣ್ಣ ಹಚ್ಚಿದ್ದಾಯಿತು!

ಸರಿ, ಈಗ ಕೆಲಸವು ಮುಗಿಯಿತು. ಅವನು ಕಣ್ತೆರೆದು ನೋಡಿದ. 'ಆಹಾ! ಇದೆಲ್ಲವೂ ನಿನ್ನ ಅನುಗ್ರಹದ ಫಲ!' ಎಂದು ಕೂಗಿದ. ಅವನ ಹೃದಯವು ಸಂತೋಷದಿಂದ ಉಕ್ಕಿತು. 'ನಾನು ಗೆದ್ದೆ! ಅಪ್ಪಾ ನೀನು ನಿಜವಾಗಿಯೂ ನನಗೆ ಅಪ್ಪನಾದೆ! ಶಾಬಾಷ್! ಓಹೊ! ಎಂತಹ ಕೌಶಲ' ಎಂದು ಹುಚ್ಚನಂತೆ ಅವನು ಬಡಬಡಿಸತೊಡಗಿದನು.

ಆನಂದದ ಪರ್ವತದಿಂದ ಅವನು ಇದ್ದಕ್ಕಿದ್ದಹಾಗೆ ಪಾತಾಳಕ್ಕೆ ಉರಳಿ ಬಿದ್ದ. 'ಅಣ್ಣಾ! ಇದನ್ನೂ ಅವರು ಕಸುಗೊಂಡುಬಿಟ್ಟರೆ. . . .?'

'ಇಲ್ಲ, ಇದನ್ನು ಬಚ್ಚಿಡುತ್ತೇನೆ'

ಭಾನುವಾರದ ದಿನ ನಿಯಮಾನುಸಾರ ಕೃಷ್ಣನು ತನ್ನ ಆಳಿನೊಡನೆ ಬಂದನು. ಆಳು ಬಳಗಡೆಯಿಂದ ಬೊಂಬೆಗಳನ್ನು ತಂದ.

'ಸರಿ, ಇಷ್ಟೇನೆ?'

'ಹೌದು ಸ್ವಾಮಿ, ಈ ವಾರ ಎಕ್ಕಡ ಹೊಲಿಯುವ ಕೆಲಸ ಬಹಳ ವಿತ್ತು.'

'ಹಾಗಾದರೆ ಈ ಕೆಲಸವನ್ನೇ ಏತಕ್ಕೆ ಬಿಟ್ಟುಬಿಡಬಾರದು?'

'ಯೋಚಿಸುವೆನು.'

ಮುರುಗನ ಕಳ್ಳನೋಟದಿಂದ ಕೃಷ್ಣನಿಗೆ ಸಂದೇಹವಾಯಿತು.

'ಮನೆಯೆಲ್ಲಾ ಹುಡುಕು' ಎಂದು ಅವನು ಆಳಿಗೆ ಆಜ್ಞಾಪಿಸಿದ.

ಆಳಿಗೆ ಕಾಗದದಲ್ಲಿ ಸುತ್ತಿದ್ದ ಒಂದು ಗಂಟು ಸಿಕ್ಕಿತು.

ಮುರುಗನು ಬಹಳ ದೈನ್ಯದಿಂದ 'ಅಯ್ಯ, ನಿನಗೆ ಪುಣ್ಯ ಬರುತ್ತೆ. ಅದರಲ್ಲಿ ಏನೂ ಇಲ್ಲ. ಅದನ್ನು ಇಲ್ಲೇ ಇಟ್ಟುಬಿಡು' ಎಂದು ಬೇಡಿಕೊಂಡನು.

ಆದರೆ ಅವನನ್ನು ಕೇಳುವವರಾರು? ಆಳು ಗಂಟನ್ನು ಕೃಷ್ಣನಿಗೆ ಕೊಟ್ಟನು. ಕೃಷ್ಣನು ಏನೂ ಹೇಳದೆ ಅಲ್ಲಿಂದ ಹೊರಟುಹೋದನು.

ಮುರುಗನು ಹಾ ಎಂದು ಕೂಗುತ್ತ ಭೂಮಿಯ ಮೇಲೆ ಮೂರ್ಛೆಯಿಂದ ಬಿದ್ದುಬಿಟ್ಟ. ಅವನ ತಂದೆ ಅವನಿಗೆ ಶುಶ್ರೂಷೆ ಮಾಡತೊಡಗಿದ.

* * * *

ಬಲಿಯ ಬಂಡೆಯ ಬಳಿಗೆ ಹೋಗುತ್ತಲೇ ಕೃಷ್ಣನು ಗಂಟನ್ನು ಬಿಚ್ಚಿ ನೋಡಿದ. ಆಹಾ! ಅವನು ಸ್ತಂಭಿತನಾಗಿ ನಿಂತುಕೊಂಡ. ಅವನ ಕೈಯೇ ಏಳದಾಯಿತು. ಅದರಲ್ಲಿ ತನ್ನ ತಂದೆಯನ್ನೇ ಪ್ರತ್ಯಕ್ಷವಾಗಿ ಕಂಡ. ಹಳೆಯ ನೆನಪುಗಳು ಒಂದೊಂದಾಗಿ ಎಚ್ಚರಗೊಂಡವು. ಆ ಮೂರ್ತಿಯನ್ನು ಅವನು ಹೇಗೆ ತಾನೇ ಒಡೆದಾನು! ಅವನ ಮನಸ್ಸು ಕರಗಿತು. ಇಂದಿನ ವೇಳೆಗೆ ಅವನು ಎಷ್ಟೋ ಮೂರ್ತಿಗಳನ್ನು ಅದೇ ಬಂಡೆಯ ಮೇಲೆ ಒಡೆದುಹಾಕಿದ್ದ. ಆ ಮೂರ್ತಿಗಳಲ್ಲೂ ಅಪೂರ್ವ ಶಿಲ್ಪಸೌಂದರ್ಯವಿತ್ತು. ಆದರೆ ಅವುಗಳಿಂದ ಅವನ ಮನಸ್ಸು ಕರಗಲಿಲ್ಲ; ಅವುಗಳಿಂದ ಅವನಲ್ಲಿದ್ದ ಈರ್ಷ್ಯಾಗ್ನಿಯು ಇನ್ನೂ ಜೋರಾಗಿ ಹೊತ್ತಿಕೊಂಡಿದ್ದಿತು.

ಆದರೆ ಇದೋ! ಇದರ ಕಲಾಕಾರನು ತನ್ನ ಪ್ರಾಣವನ್ನೇ ಬಣ್ಣವಾಗಿ ಹಿಂಡಿ ಇದಕ್ಕೆ ಬಣ್ಣ ಕೊಟ್ಟಿದ್ದಾನೆ. ಇದು ಅವನ ಕಲ್ಪನೆಯ ರೂಪ. ಅವನು ತನ್ನ ಪ್ರೇಮವನ್ನೇ ಕರಗಿಸಿ ಅದರಿಂದ ಇದನ್ನು ಬಳಿದಿದ್ದಾನೆ. ಈ ಮೂರ್ತಿಯು ಯಾರ ಸ್ಮಾರಕವೋ ಆ ಜೀವಮೂರ್ತಿಯ ಶರೀರವು ನಷ್ಟವಾಗಿರಬಹುದು; ಆದರೆ ಇದು ಅಳಿಯುವಂತಿಲ್ಲ.

ಇಷ್ಟೇ ಅಲ್ಲ, ಇದು ಅವನ ತಂದೆಯೇ ಜೀವಿಸಿದ್ದಹಾಗೆ ಇತ್ತು. ಇದರಿಂದ ಅವನು ತನ್ನ ತಂದೆಯನ್ನು ನೋಡಿದನು. ಪ್ರೇಮವು ಎಲ್ಲಾ ತಡೆಗಳನ್ನೂ ದಾಟಿ ಹೊರಗೆ ಹರಿದುಬಂತು. ಅವನ ಕಣ್ಣುಗಳಿಂದ ತೊಟ್ಟು ತೊಟ್ಟಾಗಿ ಕಣ್ಣೀರು ಬಂತು. ಅಸೂಯೆಯೂ ಕೋಪವೂ ಅವನನ್ನು ಬಿಟ್ಟು ಓಡಿದವು.

ಅರ್ಧ ಗಂಟೆಯ ಹೊತ್ತು ಅವನು ಆ ಮೂರ್ತಿಯನ್ನು ಎವೆ ಯಿಕ್ಕದೆ ನೋಡುತ್ತಿದ್ದನು. ಅವನ ಹೃದಯದಲ್ಲಿ ನೆನಪುಗಳು ಅಲೆಯಲೆ ಯಾಗಿ ಎದ್ದವು. ಸ್ವಲ್ಪ ಯೋಚಿಸಿಕೊಂಡು ಅವನು ಹಿಂತಿರುಗಿದನು. ಒಬ್ಬನೇ ಗುಡಿಸಿಲ ಒಳಗೆ ಬಂದನು. ಅವನ ಜೊತೆಯಲ್ಲಿ ಆ ಆಳು ಇರಲಿಲ್ಲ.

'ತಮ್ಮ, ಮುರುಗಾ!' ಎಂದು ನಡುನಡುಗುವ ಸ್ವರವು ಕಿವಿ ಯಲ್ಲಿ ಬಿತ್ತು.

ಮುರುಗನು ಆಶ್ಚರ್ಯದಿಂದ ಹೊರಗೆ ಬಂದ. ಎರಡನೆಯ ಸಾರಿ ತಮ್ಮ ಎಂದು ಕರೆಯುವುದನ್ನು ಕೇಳಿದರೂ ಕೃಷ್ಣನು ತನ್ನನ್ನು ತಮ್ಮ ಎಂದು ಕರೆಯುತ್ತಿದ್ದಾನೆಂದು ಅವನು ನಂಬಲಿಲ್ಲ.

'ತಮ್ಮಾ ನನ್ನನ್ನು ಕ್ಷಮಿಸುವಿಯಲ್ಲವೆ?'

'ಏನಿದು? ನಾನು ಸ್ವಪ್ನವನ್ನು ನೋಡುತ್ತಿದ್ದೇನೆಯೆ? ಕೃಷ್ಣನು ಹೀಗೆ ಮಾತನಾಡುತ್ತಿದಾನೆಯೆ?—' ಎಂದು ಅವನು ಕಣ್ಣನ್ನು ಉಜ್ಜಿ ಕೊಂಡು ನೋಡಿದ.

ಕಣ್ಣೀರು ಸುರಿಸುತ್ತಾ ಕೈಯಲ್ಲಿ ಆ ಸುಂದರ ಮೂರ್ತಿಯನ್ನು ಹಿಡಿದುಕೊಂಡು ಕೃಷ್ಣನು ಗದ್ಗದ ಸ್ವರದಲ್ಲಿ 'ತಮ್ಮಾ, ನಾನು ದೊಡ್ಡ ಪಾಪಿ. ನನ್ನನ್ನು ಕ್ಷಮಿಸು' ಎಂದು ಹೇಳಿದನು.

'ಏನು ಸಮಾಚಾರ? ಇದನ್ನು ಹಿಂದಕ್ಕೆ ಏಕೆ ತಂದಿರಿ?'

'ಇದನ್ನು ತೆಗೆದುಕೊ. 'ಅಪ್ಪ'ನು ನಿನ್ನ ಬಳಿಯಲ್ಲೇ ಇರಬೇಕು. ನಮ್ಮ ತಂದೆಯ ಮಗನು ನೀನೇ, ನಾನಲ್ಲ. ಸಾಯುವವರೆಗೂ ನಿನ್ನನ್ನೇ ನೆನೆದರು. ನಿನ್ನ ಎಲ್ಲಾ ಗೊಂಬೆಗಳನ್ನೂ ನಾನು ಒಡೆದು ಹಾಕಿದೆ. ನೀನು ಅವರನ್ನು ನಿನ್ನ ಹೃದಯದಲ್ಲಿ ಪೂಜಿಸುತ್ತಿರುವೆಯೆಂಬುದು ಇಂದು

ತಿಳಿಯಿತು. ಇದನ್ನು ತೆಗೆದುಕೊ, ನಿನ್ನ 'ಅಪ್ಪ'ನ ಮೂರ್ತಿ. ನನ್ನನ್ನು ಕ್ಷಮಿಸು. ಪ್ರೇಮದ ಇದುರಿನಲ್ಲಿ ಜಾತಿಕುಲಗಳೇನು? ಈಗ ನನ್ನ ಕಣ್ಣು ತೆರೆದವು.'

ಕಣ್ಣೀರು ಸುರಿಸುತ್ತಾ ಮುರುಗನು ಆ ಮೂರ್ತಿಯನ್ನು ತನ್ನ ಕೈಗೆ ತೆಗೆದುಕೊಂಡನು.

'ಅಣ್ಣಾ, ನಾನು ನನ್ನ ತನುಮನದಿಂದ ಈ ಮೂರ್ತಿಯನ್ನು ಮಾಡಿದೆ. ನನ್ನ ಆಶೆಯು ಈಡೇರಿತು. ಆಣೆಯಿಟ್ಟು ಹೇಳುತ್ತೇನೆ, ಇನ್ನು ಮುಂದೆ ನಾನು ಈ ಕೆಲಸವನ್ನು ಮಾಡುವುದಿಲ್ಲ. ಮೆಟ್ಟು ಹೊಲಿಯುವುದೇ ಇನ್ನು ನನ್ನ ಕೆಲಸ.'

ಅವರಿಬ್ಬರ ಕಣ್ಣುಗಳಿಂದಲೂ ಕಣ್ಣೀರಿನ ಹೊಳೆಯು ಉಕ್ಕಿ ಬಂದಿತು. ಆ ಮಹಾಪೂರದಲ್ಲಿ ಎಂತೆಂತಹ ಗುಣಗಳು ತೊಳೆದು ಹೋಗುತ್ತಿದ್ದವೊ ಅದನ್ನು ಯಾರು ಬಿಡಿಸಿ ಹೇಳಬಲ್ಲರು?



# ಸಂಗೀತ

**ಶ್ರೀಮಾನ್ ಎಸ್. ಜಿ. ಶ್ರೀನಿವಾಸಾಚಾರ್ಯರು** ನಡೆ, ನುಡಿ, ಬದುಕು, ಸಾಹಿತ್ಯ, ಎಲ್ಲೆಲ್ಲಿಯೂ ಒಂದು ಮೇಲ್ಮಟ್ಟವನ್ನು ತೋರಿಸ ತಕ್ಕವರು. ಎಲ್ಲಿಂದಾದರೂ 'ಅಪಸ್ವರ' ಕೇಳಿದರೆ, ಕಂಡರೆ, ಕಿವಿಕಣ್ಣು ಗಳನ್ನು ಮುಚ್ಚಿಕೊಳ್ಳುತ್ತಾರೆ. ಅವರ ಈ ಸ್ವಭಾವಕ್ಕೆ ಈ ಕತೆ 'ಸಂಗೀತ' ಒಂದು ನಿದರ್ಶನ. ಜೋಡಿ ಸರಿಯಿಲ್ಲದ ಮದುವೆ ಆಗಬಾರದು ಅವರ ಪ್ರಕಾರ.

ಬಹಳ ಕಾಲ 'ಡಿಸ್ಟ್ರಿಕ್ಟ್ ಜಜ್' ಪದವಿಯಲ್ಲಿದ್ದು ಮದರಾಸು ಆಧಿ ಪತ್ಯದ ನಾಲ್ಕು ಭಾಷಾ ಪ್ರಾಂತಗಳ ಪರಿಚಯವೂ ಅನುಭವವೂ ಇದೆ ಇವರಿಗೆ. ಅನೇಕ ಸಮಸ್ಯೆಗಳನ್ನು ತಮ್ಮ ಲಘುಹಾಸ್ಯದಿಂದ ಸುಲಭ ವಾಗಿ ಬಿಡಿಸುತ್ತಾರೆ, ವಿಡಂಬನದ ಮೂಲಕ ಅಂದವಾದ ಬಣ್ಣದ ಬೆಳ ಕನ್ನು ಚೆಲ್ಲುತ್ತಾರೆ.

ಈ ಕತೆಯ ಹೆಸರು 'ಸಂಗೀತ'ವಾದುದರಿಂದ ಇದರಲ್ಲಿ ಸಂಗೀತ ವಿರುವುದು ಸ್ವಾಭಾವಿಕ. ತಮಿಳು ಪದಗಳನ್ನು ಮೂಲರೂಪದಲ್ಲಿಯೇ ಕೊಡಲಾಗಿದೆ. ಮೊದಲಿನ ಒಂದೆರಡು ಹಾಡುಗಳು ಹಾಡಿಗಾಗಿಯೇ ಇವೆ. ಆದರೆ ಕೊನೆಯ ಹಾಡು ಕತೆಗೆ ಸಂಬಂಧಿಸಿದ್ದು. ಹಾಡಿನಿಂದ ಕತೆಯ ಸೊಬಗು ಹೆಚ್ಚಿದೆಯೇ ವಿನಾ ಹಾಡಿನ ಅರ್ಥ ತಿಳಿಯದೇ ಇದ್ದ ಮಾತ್ರಕ್ಕೆ ಕತೆ ತಿಳಿಯದೆ ಹೋಗುವುದಿಲ್ಲ.

ಈ ಸಂಗತಿಯನ್ನು ಯಾರಾದರೂ ಓದಿದರೆ ಇದು ಬರಿಯ ಕಟ್ಟು ಕತೆಯೆಂದೇ ಭಾವಿಸಬಹುದು. ಆದರೆ ಅವರು ಆ ವಿಧವಾಗಿ ಎಣಿಸು ವುದು ಸತ್ಯವೆಂಬುದೇ ಜನರಿಗೆ ಸುಳ್ಳಾಗಿಹೋಗಿರುವ ಈ ಕಾಲದ ವಿಶೇಷವೇ ಹೊರತು ಈ ಚರಿತ್ರೆಯ ತಪ್ಪಲ್ಲ. ಯಾವುದು ಏನೇ ಇರಲಿ, ನಾನಿರುವ ಅವಸ್ಥೆಯಲ್ಲಿ ಈ ಪ್ರಸಂಗವನ್ನು ಬಡನೆಯೇ ಹೊರಗೆಡವಿ ವಾಚಕರ ಸಂಚಿಕೆಯೊಡನೆ ಅವರ ಸಹಾಯವನ್ನೂ ಪ್ರಾರ್ಥಿಸಿ ಪಡೆಯ ಬೇಕಾಗಿ ಬಂದಿದೆ.

ನನ್ನ ಅವಸ್ಥೆಗೆ ಕಾರಣರಾದ ಮಹಾನುಭಾವರು ತಮ್ಮ ಹೆಸರನ್ನು ನನಗೆ ತಿಳಿಸಲಿಲ್ಲ. ಅವರು ಇಂಥವರೇ ಎಂದು ಹೇಳಲಿಕ್ಕೆ ನಾನು ಅರ್ಹ ನಲ್ಲ. ಈ ಸಮಯದಲ್ಲಿ ಅವರು ಎಲ್ಲಿರುವರೆಂದು ಊಹಿಸುವುದಕ್ಕೆ ಕೂಡ ನನಗೆ ಶಕ್ತಿಯಿಲ್ಲ. ಅವರನ್ನು ನಾನು ಮತ್ತೊಂದು ಸಲ ಕಾಣುವೆನೇ ಎಂದು ಯೋಚಿಸುವಾಗಲೆಲ್ಲಾ ಒಂದು ವಿಧವಾದ ಚಿಂತೆಯು ಬಂದು ನನ್ನನ್ನು ಪೀಡಿಸುತ್ತದೆ.

*            *            *            *

ಅವರ ದರ್ಶನವು ನನಗೆ ಲಭಿಸಿದುದೇ ಎದುರಿನಲ್ಲಿ ಕಾಣಬಾರದ ವಿಷಯ. ಬೆಳಗ್ಗೆ ಸುಮಾರು ಐದು ಗಂಟೆಯಿರಬಹುದು. ಮೈಲಾಪುರದ ಕಪಾಲೀಶ್ವರ ಕೊಳದ ಪಶ್ಚಿಮ ಪಾರ್ಶ್ವದಲ್ಲಿ ಬ್ರಾಡೀಸ್ ರಸ್ತೆಯಲ್ಲಿ ನಾನು ಹೋಗುತ್ತಿದ್ದೆ. ಪ್ರಕೃತಿಯೆಲ್ಲ ನಿಶ್ಶಬ್ದವಾಗಿದ್ದ ಆ ಹೊತ್ತಿನಲ್ಲಿ ಕೊಳದ ಮೆಟ್ಟಲುಗಳ ಮೇಲಿಂದ ಯಾರೋ ವೀಣೆಯ ಜೊತೆಗೆ ಮನ ಕರಗುವಂಥ ಗೀತ ಹಾಡುತ್ತಿರುವುದನ್ನು ಕೇಳಿದೆನು. ಬಹಳ ಆಸೆಯಿಂದ ಮೆಟ್ಟಲುಗಳ ಕಡೆಗೆ ಹೊರಟು ಬಂದು ಬದಿಯಲ್ಲಿ ಆ ಸಂಗೀತವನ್ನು ಕೇಳುತ್ತ ನಿಂತೆನು.

“ಆಳಾಳಿ ಕರೈಯಿನ್ರಿ ನಿರ್‌ಕವಿಲ್ಲೈ ಯೋ? ಕೊಡಿಯು
ಆಲಮುಮು ದಾಗ ವಿಲ್ಲೈ ಯೋ?
ಅಕ್ಕಡಲಿನ್ ಮೀದುವಡ ವನನಿರ್ಕ ವಿಲ್ಲೈ ಯೋ?
ಅಂದರತ್ತಗಿಲ ಕೋಡಿ
ತಾಳಾಮ ನಿಲ್ಲೈನಿರ್ಕ ವಿಲ್ಲೈಯೋ? ಮೇರುವುಂ
ದನುವಾಗ ವಳೈಯ ವಿಲ್ಲೈಯೋ?”

ಅವರ ಹಾಡಿನ ಮಂತ್ರಶಕ್ತಿಯನ್ನು ನಾನು ಹೇಗೆ ವರ್ಣಿಸಲಿ! ಇದುವರೆಗೂ ನಾನು ಕೇಳಿರುವ ಎಲ್ಲಾ ಸಂಗೀತಕ್ಕಿಂತಲೂ ಎರಡರಷ್ಟು ಇಂಪನ್ನು ಕೊಟ್ಟಿತು; ಅಷ್ಟೇ ಅಲ್ಲ, ಅದರ ಗುಣವೇ ಬೇರೆ ರೀತಿಯಾಗಿದ್ದಿತು. ಅದನ್ನು ಕೇಳುವಾಗ ನನ್ನ ಕಿವಿ ಆನಂದದಲ್ಲಿ ಮುಳುಗಿತು. ನನ್ನ ಜೀವಿತಕಾಲದಲ್ಲೆಲ್ಲಾ ನಾನು ಯಾವ ಸೊಬಗನ್ನು ಕಂಡಿದ್ದೆನೋ—ಕಾವೇರಿತೀರ, ಅಸ್ತಸೂರ್ಯ, ಚಂದ್ರಬಿಂಬ—ಅವುಗಳೆಲ್ಲಾ ಆ ಗಾನದ ಶಕ್ತಿಯಿಂದ ರೂಪವನ್ನು ಹೊಂದಿ ಪುನಃ ನನ್ನೆದುರಿನಲ್ಲಿ ಪ್ರತ್ಯಕ್ಷವಾದವು. ಎಳೇ ಹುಡುಗರ ಕೈ ಬೆರಳುಗಳ ಹಾಗೆ, ಮೃದುವಾದ ತಂಗಾಳಿ ನನ್ನ ದೇಹವನ್ನು ಸ್ಪರ್ಶಿಸಿದಹಾಗೆ ಒಂದು ವಿಧವಾದ ನಡುಕವುಂಟಾಯಿತು. ಆ ತಂಗಾಳಿ ತಂದು ಹರಡಿದ ಶ್ರೀಗಂಧ, ಗುಲಾಬಿ, ಜಾಜಿ, ಮಲ್ಲಿಗೆ ಇವುಗಳ ವಿಧವಿಧವಾದ ಸುವಾಸನೆಗಳು ನನ್ನನ್ನು ಸುತ್ತಿ ಸುತ್ತಿ ಮುಳುಗಿಸಿದವು. ಈ ರೀತಿಯಾಗಿ ನನ್ನ ಪಂಚೇಂದ್ರಿಯಗಳನ್ನು ವಶಪಡಿಸಿಕೊಂಡುದೇ ಅಲ್ಲದೆ ಆ ನಾದದ ಶಕ್ತಿಯು ನನ್ನ ಆತ್ಮವನ್ನೂ ಕವಿದಿತು. ಮತ್ತೊಬ್ಬರನ್ನು ನೋಯಿಸುವ ಹೊಟ್ಟೆಕಿಚ್ಚು, ಕೋಪ, ಅಸಹನೆ, ಕ್ರೌರ್ಯ ಮೊದಲಾದ ಒಂದೊಂದು ಗುಣವೂ ನೀರಿನಲ್ಲಿ ತೊಳೆದುಹೋದ ಕೊಳೆಯ ಹಾಗೆ ಮನಸ್ಸನ್ನು ಬಿಟ್ಟು ಉದುರಿ ಹೋಗುವಂತೆ ತೋರಿತು. 'ಅದೊ! ಮುಂದೆ ಕಾಣುವ ಬಾಗಿಲನ್ನು ದಾಟಿದರೆ, ಒಡನೆಯೇ ಸ್ವರ್ಗವನ್ನು ಕಾಣಬಹುದು. ಅಲ್ಲಿ ಪ್ರವೇಶಿಸಿದ ಮಾತ್ರಕ್ಕೆ ನೀನೂ ಮೋಕ್ಷವನ್ನು ಹೊಂದುವೆ; ನಿನ್ನ ಹಾಗೆ ಇತರರೂ ಮೋಕ್ಷವನ್ನು ಹೊಂದುವರು. ಆದುದರಿಂದ ಜೀವಾತ್ಮಗಳು ಒಬ್ಬರಿಗೊಬ್ಬರು ಸಹಾಯವನ್ನು ಮಾಡಿಕೊಳ್ಳಬೇಕು' ಎನ್ನುವಹಾಗೆ ಒಂದು ಭಾವನೆ ಮನಸ್ಸಿನಲ್ಲಿ ವ್ಯಾಪಿಸಿತು.

ಆಗ ಆ ಮಹಾನುಭಾವರು ನಾನು ಬಂದು ನಿಂತಿರುವದನ್ನು ಕಂಡು ತಾವು ಹಾಡುವುದನ್ನು ನಿಲ್ಲಿಸಿದರು. ಆ ಸಂಗೀತದ ಮಾಯಾಮೋಹವು ತೀರಿದಮೇಲೆ, ಕನಸಿನ ಮಧ್ಯದಲ್ಲಿ ಎಚ್ಚತ್ತವನಹಾಗೆ ಮೈಲಾಪುರದ ಬ್ರಾಡೀಸ್ ರಸ್ತೆಯಲ್ಲಿರುವುದನ್ನು ನಾನು ಪುನಃ ಅರಿತೆನು. ನಾನರಿಯದ

ಯಾವುದೊ ಒಂದು ಶಕ್ತಿಯಿಂದ ಆಕರ್ಷಿಸಲ್ಪಟ್ಟು ಅವರ ಹತ್ತಿರ ಹೋಗಿ ನಿಂತೆನು. ಅವರಿಗೆ ವಯಸ್ಸು ಸುಮಾರು ಇಪ್ಪತ್ತೈದು ಇರಬಹುದು. ಆದರೆ ತಲೆಯಲ್ಲಿ ಜಡೆ ಮತ್ತು ಅದಕ್ಕೆ ತಕ್ಕಹಾಗೆ ಮುಖದಲ್ಲಿ ಗಡ್ಡ ಬೆಳೆಸಿದ್ದರು. ನಡುವಿನಲ್ಲಿ ಸಾಧಾರಣವಾದ ಒಂದು ಸಣ್ಣ ಅಂಚಿನ ಪಂಚೆಯೂ ಎದೆಯ ಮೇಲೆ ಒಂದು ಕೃಷ್ಣಾಜಿನದ ಯಜ್ಞೋಪವೀತವೂ ಇದ್ದುವು. ಅವರ ಕೈಯಲ್ಲಿದ್ದ ವೀಣೆಯನ್ನು ಯಾರೂ ಒಂದೂವರೆ ಆಣೆಗೆ ಸಹ ಕೊಂಡುಕೊಳ್ಳುವಂತಿರಲಿಲ್ಲ. ಯಾವುದೊ ಕಾಡುಮರದಿಂದ ಮಾಡಿತ್ತು. 'ಈ ವಾದ್ಯದ ಸಹಾಯದಿಂದಲೊ ಅಥವಾ ಈ ಯೌವನದ ಬಲದಿಂದಲೊ ಇವರು ಇಷ್ಟು ಅದ್ಭುತವಾಗಿ ಹಾಡಿದ್ದು' ಎಂದು ನಾನು ಭ್ರಮೆಗೊಂಡು ನಿಂತೆನು.

'ಏನು ಹುಡುಕುತ್ತೀರಿ? ಏನು ಬೇಕು?' ಎಂದು ಅವರೇ ನನ್ನನ್ನು ಮಾತನಾಡಿಸಿದರು. ಕೆಲವು ಜನ ಸಂಗೀತ ವಿದ್ವಾಂಸರಿಗೆ ಹಾಡುವಾಗ ಧ್ವನಿ ಇಂಪಾಗಿರುವುದು. ಮಾತನಾಡುವಾಗ ಮಾತ್ರ ಬಡಗಿಯು ಮರವನ್ನು ಗರಗಸದಿಂದ ಕೊಯ್ಯುವ ಸ್ವರವನ್ನೂ ಸೋಲಿಸುವರು. ಆದರೆ ಈ ಮಹಾನುಭಾವರು ಹಾಗಲ್ಲ. ಅವರ ಕಂಠದ ಇಂಪಿನಕೈಗೆ ಸಿಕ್ಕಿ ಹೋದೆ ನಾನು. 'ಅವರು ಮಾತನಾಡುವುದನ್ನು ಏತಕ್ಕೆ ನಿಲ್ಲಿಸಿಬಿಟ್ಟರೊ ಎಂದು ವ್ಯಸನಪಟ್ಟೆನೇ ಹೊರತು, ಅವರು ಪ್ರಶ್ನೆ ಕೇಳಿದ್ದಾರೆ, ಅದಕ್ಕೆ ಉತ್ತರಕೊಡಬೇಕು ಎಂಬುದೇ ನನಗೆ ತೋಚಲಿಲ್ಲ. ಅವರು ಪುನಃ 'ಏನು ಬೇಕು? ಏನು ನೋಡುತ್ತಿದ್ದೀರಿ?' ಎಂದು ಒತ್ತಾಯವಾಗಿ ಕೇಳಿದರು.

ಆದಕ್ಕೆ ನಾನು 'ನೀವು ಯಾರೊ? ಗೊತ್ತಾಗಲಿಲ್ಲ! ಇದಕ್ಕೆ ಮೊದಲು ನಿಮ್ಮನ್ನು ಕಾಣುವಂಥ ಭಾಗ್ಯ ಈ ನಗರಕ್ಕೆ ಲಭಿಸಿಲ್ಲವಲ್ಲ?' ಎಂದೆನು.

ಇದಕ್ಕೆ ಮೊದಲು ನಾನು ಇಲ್ಲಿಗೆ ಬಂದಿದ್ದಿಲ್ಲ. ನಾನು ಒಬ್ಬ ಋಷಿ' ಎಂದರು ಅವರು.

'ಹಾಗೇನು!' ಅಂದೆ ನಾನು.

'ಆದರೆ ಋಷಿಗಣಗಳ ಮಧ್ಯದಲ್ಲಿ ನಾನೆಲ್ಲಿಯವನು? ಒಬ್ಬ ಅಲ್ಪನು! ಮೇಲಾಗಿ ಒಬ್ಬ ಕಿರಿಯ ಋಷಿ' ಎಂದರು.

ಕಿರಿಯ ಋಷಿ ಯಾರು! ಹಿರಿಯ ಋಷಿ ಯಾರು! ನನ್ನನ್ನು ಇವರು ಪರಿಹಾಸ್ಯ ಮಾಡುತ್ತಿಲ್ಲವಷ್ಟೇ! ಆಂಗ್ಲ ಭಾಷೆಗೆ ಇಳಿದವರಿಗೆ ತಮಗೆ ಮಿಕ್ಕ ಯಾವುದು ತಿಳಿದಿರಲಿ ತಿಳಿಯದಿರಲಿ, ಋಷಿಗಳು ಎಂಬುವರೇ ಇಲ್ಲ, ಅದೆಲ್ಲ ಕಟ್ಟುಕತೆಗಳು ಎನ್ನುವುದಕ್ಕೆ ಸಹ ಗೊತ್ತಿಲ್ಲವೆ? ನನ್ನನ್ನು ವಿದ್ಯಾವಂತನಲ್ಲ ಎಂದಲ್ಲವೆ ತಿಳಿದಿದ್ದಾರೆ! ಅಲ್ಲದೆ ಒಂದು ಸಂದೇಹ ಬಂತು. ಅವರ ಮುಖವನ್ನು ದೃಷ್ಟಿಸಿನೋಡಿದೆನು. ಒಂದು ಎಳೇ ಮಗುವಿನ ಶಾಂತ ಮೂರ್ತಿಯ ಹಾಗೆ ಇತ್ತೇ ಹೊರತು ಹುಚ್ಚು ಮನುಷ್ಯನ ಚಿಹ್ನೆಗಳಾವುದೂ ಅವರಲ್ಲಿ ಕಂಡುಬರಲಿಲ್ಲ. ಯಾವುದು ಏನೇ ಇರಲಿ, ಅವರು ಅತಿ ಅದ್ಭುತವಾಗಿ ಹಾಡುತ್ತಾರೆ. ಅದರಲ್ಲಿ ಸಂದೇಹವಿಲ್ಲ. ಇದರ ಮೇಲೆ ಅವರು ತಾವು ಒಬ್ಬ ಋಷಿಯೆಂದೇ ಹೇಳಿಕೊಳ್ಳಲಿ; ತಾನೇ ಮಹಾವಿಷ್ಣುವೆಂದು ಸಾಧಿಸಲಿ! ಅದರಿಂದ ನಮಗೇನು ಕಷ್ಟ? ನನಗೆ ಬೇಕಾದುದು ಮತ್ತೊಂದು ಸಲ ಅವರು ಹಾಡುವುದನ್ನು ಕೇಳುವುದು· ಅವರ ಇಷ್ಟವಿದ್ದಂತೆ ಸಲ್ಲಾಪ ನಡೆಸುವುದರಲ್ಲಿ ನನಗೇನು ಕಷ್ಟ?

ಈ ರೀತಿಯಾಗಿ ಎಣಿಸಿ 'ನೀವು ಒಬ್ಬ ಕಿರಿಯ ಋಷಿ ಎಂದು ಹೇಳುವಿರಿ. ವಿನಯಕ್ಕಾಗಿ ನೀವು ಹಾಗೆ ಹೇಳಿರಬೇಕು. ಆದರೆ ಯಾವ ಋಷಿಯೇ ಆಗಲಿ ಹಿಂದೂಸ್ಥಾನಕ್ಕೆ ಬಂದು ಬಹಳ ಕಾಲವಾಗಿದೆಯೆಂದು ಭಾವಿಸುತ್ತೇನೆ.' ಎಂದು ಹೇಳಿದೆನು.

'ಹೌದು! ಪಟ್ಟಣದಲ್ಲಿ ಜನರು ಸಂಸ್ಕೃತ ಮಾತನಾಡುವುದನ್ನು ನಿಲ್ಲಿಸಿದಾಗಿನಿಂದ ನಾವು ಇಲ್ಲಿಗೆ ಬರುವುದನ್ನು ನಿಲ್ಲಿಸಿಬಿಟ್ಟೆವು. ಬಟ್ಟೆನಲ್ಲಿ ಭಾಷೆಯು ತಿಳಿಯದೆ ಹೋದರೆ ಕಲೆತು ಸಹವಾಸಮಾಡುವುದು ಹೇಗೆ?

'ಈ ಕಷ್ಟಗಳು ಮನುಷ್ಯರಿಗೆ ತಾನೇ ಇರುವುದು; ಋಷಿಗಳಿಗೆ ಏನು? ಅವರು ಎಲ್ಲಾಭಾಷೆಗಳನ್ನೂ ಬಲ್ಲವರಲ್ಲವೆ? ಈಗ ನೀವು ಬಹಳ ಸುಲಭವಾಗಿ ನನ್ನೊಡನೆ ತಮಿಳು ಮಾತನಾಡುತ್ತಿಲ್ಲವೆ?

'ಹಾಗಲ್ಲ. ಋಷಿಗಳಿಗೆ ಸಂಸ್ಕೃತ ಭಾಷೆಯೊಂದೇ ಗೊತ್ತಿರುವುದು. ಅಗಸ್ತ್ಯರೆಂಬ ಮಹರ್ಷಿಯ ವಿಷಯ ನೀವು ಕೇಳಿರಬಹುದು· ಅವರೊಬ್ಬರಿಗೆ ಮಾತ್ರ ತಮಿಳಿನಲ್ಲಿಯೂ ಪಾಂಡಿತ್ಯವಿದೆ. ಅವರು ನನಗೆ

ಸ್ನೇಹಿತರಾದುದರಿಂದ ಬಹಳ ಬಲವಂತಪಡಿಸಿದ ಮೇಲೆ ಅವರು ನನಗೆ ಹಲವು ತಮಿಳು ಹಾಡುಗಳನ್ನೂ ಈ ಕಾಲದಲ್ಲಿ ತಮಿಳರು ಮಾತನಾಡುವ ಹಾಗೆ ಸ್ವಲ್ಪ ತಮಿಳನ್ನೂ ಕಲಿಸಿಕೊಟ್ಟು ತಮಿಳುನಾಡನ್ನು ಹೋಗಿ ನೋಡಿಕೊಂಡು ಬಾ ಎಂದು ದಾರಿತೋರಿಸಿ ಕಳುಹಿಸಿದರು. ಸ್ವಲ್ಪ ತಪೋಧನವನ್ನು ವೆಚ್ಚಮಾಡಿ ಈ ಧೋತ್ರವನ್ನೂ ಸೃಷ್ಟಿಸಿಕೊಟ್ಟರು.' ಎಂದು ಸ್ವಲ್ಪ ಹೆಮ್ಮೆಯಿಂದ ಧೋತ್ರವನ್ನು ತೋರಿಸಿದರು.

ಅಗಸ್ತ್ಯರೆಲ್ಲಿ! ಅವರ ಸ್ನೇಹಿತರಾರು! ಇನ್ನು ಒಂದು ಕ್ಷಣದಲ್ಲಿ ವಾಲ್ಮೀಕಿಯೂ ತಾನೂ ಸೋದರಮಾವ ಸೋದರತ್ತೆ ಮಕ್ಕಳು ಎಂದು ಹೇಳಿಕೊಳ್ಳಲೂ ಬಹುದು. 'ಅಗಸ್ತ್ಯರು ಹಿಮಾಲಯದಲ್ಲಿ ವಾಸಿಸುತ್ತಾರೆ. ಅಲ್ಲಿಂದ ಇಷ್ಟು ದೂರ ಬಂದದ್ದು ನಿಮಗೆ ದೇಹಶ್ರಮ ವಾಗಿರಬಹುದಲ್ಲವೇ?' ಎಂದು ಕೇಳಿದೆನು.

'ಸ್ವಲ್ಪ ಶ್ರಮವೇ. ಏನು ಮಾಡುವುದು? ನಾಡನ್ನು ನೋಡ ಬೇಕೆಂದು ಮನಸ್ಸಿನಲ್ಲಿ ಆಸೆ ತೋರಿತು. ಒಂದು ಆಸೆಯನ್ನು ತೀರಿಸಿ ಕೊಳ್ಳಬೇಕಾದರೆ ಅದಕ್ಕೆ ಆವಶ್ಯಕವಾದ ಶ್ರಮವನ್ನು ಅನುಭವಿಸ ಬೇಕಲ್ಲವೆ?'

'ಶ್ರಮವಿಲ್ಲದೆ ಸಂಚರಿಸುವುದಕ್ಕೆ ನಾನು ಒಂದು ದಾರಿ ತೋರಿಸು ತ್ತೇನೆ.'

'ಅದು ಹೇಗೆ?'

'ನನ್ನ ಮೋಟಾರ್ ಗಾಡಿಯಿಂದ'

'ಮೋಟಾರ್ ಗಾಡಿಯೆಂದರೆ ಏನು? ಅಗಸ್ತ್ಯರು ಅದನ್ನು ನನಗೆ ಹೇಳಿಕೊಡಲಿಲ್ಲವಲ್ಲ.'

'ಆ ಭಾಷೆ ತಮಿಳಲ್ಲ ಆಂಗ್ಲಭಾಷೆ.'

'ಅದಕ್ಕೆ ಸಂಸ್ಕೃತದಲ್ಲಿ ಏನು ಹೆಸರು?'

'ಅದಕ್ಕೆ ಸರಿಯಾದ ಶಬ್ದವು ಸಂಸ್ಕೃತದಲ್ಲಿ ಇಲ್ಲವೆಂದು ಕಾಣು ತ್ತದೆ. ನಿಮಗೆ ಆಕ್ಷೇಪಣೆಯಿಲ್ಲದಿದ್ದರೆ ಶಬ್ದವನ್ನು ಹುಡುಕುವುದಕ್ಕಿಂತ ಆ ವಸ್ತುವನ್ನೇ ನೋಡಿ ತಿಳಿದುಕೊಳ್ಳಬಹುದು. ಅದನ್ನು ಹೊರಗೆ

ತರುವುದಕ್ಕೋಸ್ಕರವಾಗಿಯೇ ನಾನು ಅದರ ಲಾಯಕ್ಕೆ ಹೋಗುತ್ತಿದ್ದೆ' ಎಂದೆನು.

ಕೂಡಲೆ 'ನಾನು ಬರುತ್ತೇನೆ' ಎಂದು ಹೇಳಿ ಅವರು ವೀಣೆಯನ್ನು ಎತ್ತಿಕೊಂಡು ಬೇಗಬೇಗನೆ ನಡೆದರು. ಲಾಯಕ್ಕೆ ಹೋದೆವು. ಗಾಡಿಯನ್ನು ಹೊರಕ್ಕೆ ತಂದು ಹಿಂಬದಿಯಲ್ಲಿ ವೀಣೆಯನ್ನಿಟ್ಟು ಮುಂದುಗಡೆಯ ಆಸನದಲ್ಲಿ ನಾವಿಬ್ಬರೂ ಕುಳಿತುಕೊಂಡೆವು. ಗಾಡಿಯು ಹೊರಟಿತು. ಹೊಸ ಆಟದ ಸಾಮಾನು ಒಂದು ನೋಡಿದರೆ ಮಗುವಿಗೆ ಉಂಟಾಗುವ ಸಂತೋಷವನ್ನು ಅವರಲ್ಲಿ ಕಂಡೆನು.

'ಇದು ಬಹಳ ಉಲ್ಲಾಸವಾಗಿದೆ. ಇಷ್ಟು ವೇಗದಲ್ಲಿ ಹೋಗುವುದಲ್ಲ! ಇದಕ್ಕೆ ಕಾಲು ನೋಯುವುದಿಲ್ಲವೆ?' ಎಂದು ಕೇಳಿದರು.

'ಇದಕ್ಕೆ ಉಸಿರು ಇಲ್ಲ; ಕಾಲುಗಳೂ ಇಲ್ಲ—ಹೊರಳುವ ಚಕ್ರಗಳು ಮಾತ್ರ ಇವೆ.'

'ಹಾಗೇನು? ದೇವೇಂದ್ರನ ರಥದ ಹಾಗೆಯೊ?'

'ಹೆಚ್ಚುಕಮ್ಮಿ ಅದೇ ರೀತಿಯಾಗಿದೆ. ನೀವು ಆಗಾಗ ಅದರಲ್ಲಿ ಕುಳಿತು ಸಂಚಾರ ಮಾಡಿರಬಹುದಲ್ಲವೆ?'

'ಬಹಳ ಇಲ್ಲ. ನಾನು ಹೇಳಿದೆನೆಂದು ಯಾರಿಗೂ ಹೇಳಬೇಡಿರಿ. ತನ್ನ ರಥದಲ್ಲಿ ಬೇರೆ ಜನ ಹೋಗುವುದು ದೇವೇಂದ್ರನ ಮನಸ್ಸಿಗೆ ಒಪ್ಪುವುದಿಲ್ಲ. ಎಂದಾದರೂ ನಾಟಕದಿಂದಲೊ, ಸಂಗೀತದಿಂದಲೊ ಅಮೃತರಸದಿಂದಲೊ ಮನಸ್ಸಿಗೆ ಬಹಳ ತೃಪ್ತಿಯಾಗಿದ್ದರೆ 'ಮಾತಲಿ, ಇವರನ್ನು ಸ್ವಲ್ಪ ನಮ್ಮ ರಥದಲ್ಲಿ ಕುಳ್ಳಿರಿಸಿ ಎರಡು ಮೂರು ಪ್ರಪಂಚವನ್ನು ಸಂಚರಿಸಿ ಬಾ' ಎಂದು ಅಪ್ಪಣೆಯಾಗುತ್ತಿತ್ತು.

'ಈ ಮೋಟಾರುಗಳು ಮೇಘದಲ್ಲಿ ಸಂಚಾರ ಮಾಡುವುದಕ್ಕೆ ಆಗುವುದಿಲ್ಲ. ಭೂಮಿಯುಮೇಲೆ ಗಟ್ಟಿಯಾದ ರಸ್ತೆಗಳಲ್ಲಿ, ಸಮವಾಗಿದ್ದರೆ ಮಾತ್ರ, ಸಂಚಾರ ಮಾಡಬಹುದು.'

'ನಾವು ಈಗ ಹೋಗುತ್ತಿರುವುದೆಲ್ಲಿಗೆ?'

'ಶಿಂಗಪೆರುಮಾಳ್ ಗುಡಿ ಎಂದು ಸುಮಾರು ಮೂರು ಯೋಜನ ದೂರದಲ್ಲಿರುವ ಒಂದು ಸ್ಥಳಕ್ಕೆ ಹೋಗುವುದೇ ನನ್ನ ಉದ್ದೇಶ. ನಿಮಗೇನೂ ಆಕ್ಷೇಪಣೆಯಿಲ್ಲ ತಾನೆ?'

'ಗುಡಿಯೇ? ಬಹಳ ಸಂತೋಷ.'

'ಅದೇ ಗುಡಿಯಲ್ಲಿ ನನಗೆ ತಿಳಿದವರೊಬ್ಬರಿಗೆ ಈ ದಿನ ಬೆಳಿಗ್ಗೆ ವಿವಾಹವು ನಡೆಯಲಿದೆ.'

'ವಿವಾಹವೆ! ಇನ್ನೂ ಸಂತೋಷ. ದೇವರ ದರ್ಶನದ ಹಾಗೆ ಉತ್ತಮರಾದ ದಂಪತಿಗಳನ್ನು ಕಾಣುವುದೂ ಒಂದು ಪುಣ್ಯಕಾರ್ಯ.'

'ಆ ದಂಪತಿಗಳನ್ನು ನೋಡಿದಮೇಲೆ ವಿವಾಹವನ್ನು ನಿಲ್ಲಿಸಿಬಿಟ್ಟರೆ ಪುಣ್ಯ ಎಂದು ನಿಮಗೆ ತೋರಬಹುದು.'

'ಅದೇನು ಹಾಗೆ ಹೇಳುತ್ತೀರಿ? ಮಂಗಳಕರವಾದ ಕಾರ್ಯವನ್ನು ನಿಲ್ಲಿಸಬಹುದೆ?'

'ಹದಿನೈದು ವರುಷದ ಕನ್ಯೆಯನ್ನು ಅರವತ್ತೆರಡು ವರ್ಷದ ಮುದುಕನು ಮದುವೆಯಾಗುತ್ತಾನೆ. ಈ ವಿಷಯದಲ್ಲಿ ಮಂಗಳ ಏನಿದೆ? ನನಗೇನೂ ಕಾಣುವುದಿಲ್ಲವಲ್ಲ.'

'ಅಹಾ! ಹೆಣ್ಣಿಗಿಂತ ನಾಲ್ಕರಷ್ಟು ವಯಸ್ಸಾದವನೆ? ಇದು ತುಂಬ ನ್ಯಾಯವಿರೋಧವಲ್ಲವೆ? ಅವನು ಒಂದು ವೇಳೆ ಚ್ಯವನ ಋಷಿಯ ಹಾಗೆ ಚ್ಯವನಪ್ರಾಶನನ್ನು ತಿಂದು ಪುನಃ ಯೌವನವನ್ನು ಪಡೆದಿದ್ದಾನೆಯೇನು? ಹಾಗಾಗಬೇಕಾದರೆ ಔಷಧವೊಂದೇ ಸಾಲದಲ್ಲ; ತಪೋಬಲವೂ ಬೇಕು.'

'ಈ ಮುದುಕನು ಆ ಬಗೆಯ ಯಾವ ತಪಸ್ಸನ್ನೂ ಮಾಡಿಲ್ಲ. ಆಯುಷ್ಯದಲ್ಲಿ ಇವರು ಮಾಡಿದ ತಪಸ್ಸೆಲ್ಲ ಕೇವಲ ಹಣವನ್ನು ಸಂಪಾದಿಸುವದಕ್ಕೆ. ಅದನ್ನು ಅಪರಿಮಿತವಾಗಿಯೇ ಪಡೆದರು. ಯೌವನವನ್ನು ಪಡೆಯಲೂ ಇಲ್ಲ, ನಿಲ್ಲಿಸಿಕೊಳ್ಳಲೂ ಇಲ್ಲ. ಹುಟ್ಟುಗೂನು ಅವರು. ವಯೋಧಿಕ್ಯದಿಂದ ಈಗ ನಡೆಯುವಾಗ ಕಾಲುಗಳು ತತ್ತರಿಸುತ್ತವೆ. ಕೈ ಬೆರಳುಗಳು ನಡಗುತ್ತವೆ. ಕಣ್ಣಿನ ದೃಷ್ಟಿ ಸ್ವಲ್ಪ ಮಧ್ಯಮ. ಆ ಸುಂದರಿಯ ದೌರ್ಭಾಗ್ಯವಶದಿಂದ ದೃಷ್ಟಿಯು ಪೂರ್ಣವಾಗಿ ಆಳಿಸಿಹೋಗದೆ

ಅರ್ಥ ಉಳಿದು ನಿಂತಿದೆ. ಆದರಿಂದಲೇ ಅವಳನ್ನು ಕಂಡು ಮೋಹಪಟ್ಟದ್ದು. ಗಿಣಿಗೂ ಕೋತಿಗೂ ನಡೆಯುವ ಈ ವಿವಾಹವನ್ನು ಆಶೀರ್ವದಿಸುವ ದಕ್ಕಾಗಿಯೇ ನಾವು ಇಷ್ಟು ವೇಗವಾಗಿ ಹೋಗುತ್ತಿರುವುದು.'

'ಇಂಥ ಅನ್ಯಾಯವನ್ನು ಅರಸನು ತಡೆಯುವುದಿಲ್ಲವೆ?'

'ನಮ್ಮ ಅರಸರು ಬಹಳ ದೂರದಲ್ಲಿದ್ದಾರೆ. ಅವರ ಕಿಂಕರರ ಕಿವಿಯಲ್ಲಿ ಈ ಮಾತು ಬೀಳದೆ ಇರಲೆಂದೇ ಈ ವಿವಾಹವನ್ನು ಪಟ್ಟಣದಲ್ಲಿ ನೆರವೇರಿಸದೆ ಈ ಚಿಕ್ಕ ಊರಿನಲ್ಲಿ ಯಾರಿಗೂ ತಿಳಿಯದಂತೆ ಒಂದು ಗುಡಿಯಲ್ಲಿ ನಡೆಸುತ್ತಾರೆ.'

'ಗುಡಿಯಲ್ಲಿ ದೇವರು ಉಂಟಲ್ಲವೆ?'

'ಉಂಟೇ ಉಂಟು.'

'ಆ ಕನ್ಯೆಯು ದೇವರ ಕಾಲಿಗೆ ಬಿದ್ದು ಅಳಲಾರಳೆ? ಅವಳಿಗೆ ವಿಮೋಚನ ಸಿಗದೆ ಹೋಗುವುದೆ?'

'ಅವಳು ಹಾಗೆ ಏಕೆ ಅತ್ತಾಳು? ಅವಳಾಗಿಯೇ ಈ ವಿವಾಹವನ್ನು ಕೋರಿದ್ದಾಳೆ.'

'ಹಾಗೂ ಉಂಟೆ! ಅವಳಿಗೆ ಈ ವಿಪರೀತ ಆಸೆ ಹೇಗೆ ಬಂತು?'

'ಅವಳು ಮದುವೆಗಾಗಿ ಆಸೆಪಟ್ಟಿಲ್ಲ. ಅದರ ಮೂಲಕ ತನ್ನ ತಾಯಿ ತಂದೆಯನ್ನು ಕಾಪಾಡಬೇಕೆಂಬುದೇ ಅವಳ ನಿಜವಾದ ಆಸೆ.'

'ನೀವು ಹೇಳುವುದು ನನಗೆ ಅರ್ಥವೇ ಆಗುವುದಿಲ್ಲವಲ್ಲ!'

'ನೀವು ಕತೆಗಳನ್ನು ವಾಡಿಕೆಯಾಗಿ ಓದುತ್ತಿದ್ದರೆ, ನಾನು ವಿವರಿಸಿ ಹೇಳದೆಯೇ ಈ ಸಂಗತಿ ನಿಮಗೆ ಅರ್ಥವಾಗುತ್ತಿತ್ತು.'

ಓ! ನನಗೆ ಎಲ್ಲಾ ಕತೆಗಳೂ ಗೊತ್ತಿದೆ. ಪುರಾಣ, ಇತಿಹಾಸ ಇವುಗಳನ್ನು ಒಂದು ಅಕ್ಷರ ಕೂಡ ಬಿಡದೆ ನಾನು ಓದಿ ತಿಳಿದುಕೊಂಡಿದ್ದೇನೆ.'

'ನಾನು ಹೇಳುವುದು ಆ ಬಗೆಯ ಕತೆಗಳಲ್ಲ. ಸಿನಿಮಾ ಕತೆಗಳನ್ನು ನೀವು ಓದಿರುವಿರೊ?'

'ಸಿನಿಮಾ ಎಂಬುವರು ಯಾರು? ವಾಲ್ಮೀಕಿ, ವೇದವ್ಯಾಸರು ಇವರುಗಳಿಗಿಂತ ಅವರು ಹೆಚ್ಚು ತಿಳಿದವರೊ?'

'ಸಿನಿಮಾ ಎಂಬುವುದು ಒಬ್ಬ 'ಅವರು' ಅಲ್ಲ. ಕೆಲವು 'ಅವರು ಗಳು'. ಭಕ್ತಕೋಟಿಯನ್ನು ಎಣಿಸಿ ನೋಡಿದರೆ ಅವರೇ ಈ ಕಾಲದ ದೊಡ್ಡ ದೇವರುಗಳು.'

'ನೀವು ಹೇಳುವುದಾವುದೂ ನನಗೆ ತಿಳಿಯುವುದಿಲ್ಲ. ಅಗಸ್ತ್ಯರು ಇದಾವುದನ್ನೂ ನನಗೆ ವಿವರಿಸಿ ತಿಳಿಸಿಹೇಳದೆ ಹೋದರಲ್ಲ! ಅದು ಹೋಗಲಿ, ಆ ಕನ್ಯೆಯು ಈ ರೀತಿಯಾಗಿ ಏಕೆ ಮಾಡಿದಳು? ಅದನ್ನು ನನಗೆ ಸ್ವಲ್ಪ ವಿವರವಾಗಿ ಹೇಳಿ.'

'ಕೇಳಿ, ಹೇಳುತ್ತೇನೆ. ಇಂದಿನ ಮುಹೂರ್ತದಲ್ಲಿ ಮದುವೆಯಾಗ ತಕ್ಕವರು ಹಣವನ್ನು ಬಡ್ಡಿಗೆ ಸಾಲ ಕೊಡುವ ಜನ. ನಮ್ಮ ಲೋಕದಲ್ಲಿ ಹಲವು ಸಮಯ ಸಾಲಕೊಡುವುದೇ ಒಂದು ದೊಡ್ಡ ಉಪಕಾರ. ಈ ಉಪಕಾರವೇ ಕೆಲವು ವೇಳೆ ಇತರರನ್ನು ಕಟ್ಟಿಹಾಕುವ ಬೇಡಿಯಾಗುತ್ತೆ. ಈ ಮದುಮಗನು ಅರಿಯದೆ ಇರುವ ಮರ್ಮವೇ ಇಲ್ಲ ಈ ವ್ಯಾಪಾರ ದಲ್ಲಿ. ಆ ಹೆಣ್ಣಿನ ತಂದೆ—ಇವರುಗಳ ಹೆಸರನ್ನು ಹೊರಗೆಡಹುವುದು ನನಗೆ ಇಷ್ಟವಿಲ್ಲ—ಮದುಮಗನಿಗೆ ಹತ್ತಿರದ ಬಂಧುವಾಗಬೇಕು. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ತಮಗೆ ವಿವಾಹವಾಗುವ ಕಾಲದಲ್ಲಿ ಹೆಣ್ಣಿನ ತಂದೆ ಅವರ ಹತ್ತಿರ ಸಾಲ ತೆಗೆದರು. ನಂಬಿಕೆಯ ಮೇಲೂ ಮದುವೆ ಯಾಗುವ ಉಲ್ಲಾಸದಿಂದಲೂ ಸಾಲಪತ್ರವನ್ನು ಗಮನಿಸಿ ಓದದೆ ಅವರು ರುಜುಹಾಕಿಬಿಟ್ಟರು. ಅದು ಮೊದಲು ಪ್ರತಿವರ್ಷವೂ ತನ್ನ ಮಾತಿನ ಪ್ರಕಾರ ಬಡ್ಡಿಯನ್ನು ಸಲ್ಲಿಸುತ್ತ ಬಂದಿದ್ದಾರೆ. ಸಾಲಕೊಟ್ಟ ಗೂಸರಿಗೆ ಯಾರೂ ಹೆಣ್ಣು ಕೊಡಲು ಸಮ್ಮತಿಸಲಿಲ್ಲ. ಸುಮಾರು ಹತ್ತು ವರ್ಷಗಳ ಹಿಂದೆ ಒಬ್ಬ ಅನಾಥ ಹುಡುಗನನ್ನು ದತ್ತುಮಗನಹಾಗೆ ಪಾಲಿಸತೊಡಗಿ ದರು. ಕಳೆದ ಹತ್ತು ವರ್ಷದಿಂದ ಈ ಯುವಕನಿಗೂ ಯುವತಿಗೂ ಸ್ನೇಹ ಬೆಳೆದು ಕೊನೆಗೆ ಪ್ರೇಮದಲ್ಲಿ ಪರಿಣಮಿಸಿತು. ಇವರಿಬ್ಬರಿಗೂ ವಿವಾಹವು ನಡೆಯಲೆಂದು ಎರಡು ಮನೆಯವರೂ—ಹೊರಗೆ ಹೇಳದೆ ಹೋದರೂ—

ಮನಸ್ಸಿನಲ್ಲಿ ಸಮ್ಮತಿಸಿದರು. ಆ ಪ್ರಕಾರವಾಗಿ ಮದುವೆಯಾದರೆ ತಾವು ತೆಗೆದ ಸಾಲದ ಅಸಲನ್ನು ಕೊಡದೆ ಇರಬಹುದೆಂದು ಯೋಚಿಸಿ ಹೆಣ್ಣಿನ ತಂದೆಯು ಹಿಡಿತವಾಗಿ ಸಂಸಾರ ನಡೆಸದೆ ತನ್ನ ಸಂಪಾದನೆಯನ್ನು ಹೆಣ್ಣುಮಗಳ ವಿದ್ಯಾಭ್ಯಾಸಕ್ಕೋಸ್ಕರವಾಗಿಯೂ ತಮ್ಮ ಇತರ ಸೌಕರ್ಯಗಳಿಗೂ ಧಾರಾಳವಾಗಿ ವೆಚ್ಚಮಾಡುತ್ತ ಬಂದರು. ಆದುದ ರಿಂದ ಸಾಲವು ಹಾಗೆಯೇ ನಿಂತುಹೋಯಿತು.

'ಈಗ ತಕ್ಕ ಕಾಲವು ಒದಗಿ ಯೌವನದಿಂದ ಅರಳಿದ ಆ ಯುವತಿ ಯನ್ನು ನೋಡಿದಾಗ ಸಾಲಕೊಟ್ಟ ಆ ಗೂಸರಿಗೆ ಒಂದು ಹೊಸ ಆಸೆ ಯುಂಟಾಯಿತು. ಆ ಹುಡುಗನಿಗೆ ಬೇರೆ ಯಾವುದಾದರೂ ಹೆಣ್ಣನ್ನು ಹಿಡಿದು ಕಟ್ಟಿದರಾಯಿತು. ಪ್ರಪಂಚದಲ್ಲಿ ಎಷ್ಟೊ ಹೆಣ್ಣುಗಳಿಲ್ಲವೆ ಎಂದು ಎಣಿಸಿದರು. ಪಾಪ! ಅನಾಥನಾಗಿದ್ದ ತನ್ನನ್ನು ಹತ್ತುವರ್ಷ ಗಳಿಂದ ತಂದೆಯಹಾಗೆ ಬೆಳಸಿಕೊಂಡು ಬಂದವರು ಈ ರೀತಿ ಹೇಳುವಾಗ- ಆ ಯುವಕನು ಎದುರಾಗಿ ಮಾತನಾಡಲಾರದೆ ತತ್ತಳಿಸಿದನು. ಆಮೇಲೆ ಇವರ ಪ್ರೀತಿಯೂ ಬೇಡ, ಆಸ್ತಿಯೂ ಬೇಡ ಎಲ್ಲಿಗಾದರೂ ಹೋಗಿ ಕೂಲಿ ಕೆಲಸ ಮಾಡುತ್ತ ತನ್ನ ಮತ್ತು ಆ ಯುವತಿಯ ಹೊಟ್ಟೆಪಾಡು ನೋಡಿಕೊಂಡರಾಯಿತು ಎಂದು ಹೇಳಿಬಿಡೋಣವೆಂದು ಮನಸ್ಸಿನಲ್ಲಿ ನಿಶ್ಚಯಮಾಡಿದನು. ಅದೇ ಸಮಯಕ್ಕೆ ಗೂನರು ತಮ್ಮ ಎರಡನೆಯ ಪ್ರಸ್ತಾಪನನ್ನು ಮುಂದಿಟ್ಟರು. 'ಮರಕತಳನ್ನು ನಾನೇ ಮದುವೆ ಯಾಗುವೆನು' ಎಂದು ಹೇಳಿಬಿಟ್ಟರು. ಆ ಸಾಲಪತ್ರವನ್ನು ತೆಗೆದು ಗಟ್ಟಿಯಾಗಿ ಓದಿದರು. ತಾವು ಮರಕತಳನ್ನು ಪಾಣಿಗ್ರಹಣ ಮಾಡಿ ಕೊಂಡ ಕೂಡಲೆ ಪತ್ರವನ್ನು ಸಾಲತೀರಿದಹಾಗೆ ಹಿಂದಕ್ಕೆ ಕೊಡುವು ದಾಗಿಯೂ ಮದುವೆಗೆ ಸಮ್ಮತಿಸದೆ ಹೋದಲ್ಲಿ ಒಡನೆಯೇ ವ್ಯಾಜ್ಯ ಹೂಡುವುದಾಗಿಯೂ ಗೂನರು ಶಪಥಮಾಡಿದರು. ಪತ್ರದಲ್ಲಿಯಾದರೊ ಬಾಯಲ್ಲಿ ಮಾತನಾಡಿದ್ದ ಬಡ್ಡಿಗಿಂತ ಎರಡರಷ್ಟು ಬರೆದಿತ್ತು. ಬಡ್ಡಿಗೆ ಬಡ್ಡಿಯೂ ಬರೆದಿತ್ತು. ಇದುವರೆಗೂ ಹಿಂದಕ್ಕೆ ಸಲ್ಲಿಸಿದ ಹಣದ ಬಗ್ಗೆ ಕೇವಲ ಎರಡುಸಲವಲ್ಲದೆ ಉಳಿದುದನ್ನು ಬರೆದಿರಲೇ ಇಲ್ಲ. ಈ ಬಗೆಯಾಗಿ

ಹೆಣ್ಣಿನ ತಂದೆ ನಂಬಿ ಮೋಸಹೋಗಿದ್ದರು. ಅಸಲನ್ನೂ ಬಡ್ಡಿಯನ್ನೂ ಸೇರಿಸಿ ನೋಡಿದರೆ ಅವರು ತಮ್ಮ ಮನೆಬಾಗಿಲು ಭೂಮಿಕಾಣಿ ಎಲ್ಲವನ್ನೂ ಕೊಟ್ಟು ಉಟ್ಟ ಬಟ್ಟೆಯೊಡನೆ ಹೊರಗೆ ಹೊರಟರೂ ಸಾಲ ತೀರದಾಗಿತ್ತು. ಅವರೂ ಅವರ ಹೆಂಡತಿಯೂ ಒಳ್ಳೆ ಮಾನಸ್ಥರು. ತಮ್ಮ ಆಸ್ತಿಯೆಲ್ಲವನ್ನೂ ಸಾಲಗಾರನಿಗೆ ಬಿಟ್ಟುಕೊಟ್ಟು ಯಾರ ಕಣ್ಣಿಗೂ ಕಾಣದೆ ಎಲ್ಲಿಗಾದರೂ ಹೋಗಿ ಹುಡುಗಿಯ ಬಾಳನ್ನಾದರೂ ಕಾಪಾಡೋಣವೆಂದು ಯತ್ನಿಸಿದರು. ಈ ವಿಷಯಗಳು ತಿಳಿದ ಕೂಡಲೆ ಹುಡುಗಿಯು ತನ್ನಿಂದ ಹೆತ್ತವರಿಗೆ ಕಷ್ಟವಾಗಬಾರದೆಂದು ಯೋಚಿಸಿ, ತನ್ನ ಜೀವಮಾನವನ್ನಾದರೂ ಬಲಿಕೊಟ್ಟು, ಆ ಮನುಷ್ಯನನ್ನೇ ಮದುವೆಯಾಗುವುದಾಗಿಯೂ ಯಾರಾದರೂ ತನ್ನನ್ನು ತಡೆದರೆ ಭಾವಿಗೆ ಬಿದ್ದು ಪ್ರಾಣತ್ಯಾಗ ಮಾಡಿಕೊಳ್ಳುವುದಾಗಿಯೂ ತೀರ್ಮಾನಿಸಿದಳು. ಯಾರು ಎಷ್ಟೇ ಹೇಳಿದರೂ ಅವಳು ತನ್ನ ತೀರ್ಮಾನವನ್ನು ಬದಲಾಯಿಸಲಿಲ್ಲ. ಇಂಥ ಸಂದರ್ಭದಲ್ಲಿ ವಿವಾಹಕ್ಕೆ ಈ ದಿನದ ಪ್ರಾತಃಕಾಲದ ಮುಹೂರ್ತ ನಿಶ್ಚಯವಾಗಿದೆ. ಇಂಥ ಪುಣ್ಯಕರವಾದ ಕೆಲಸಕ್ಕೆ ಮನುಷ್ಯರು ವಾಸವಾಗಿರುವ ಸ್ಥಳವು ಸರಿಯಲ್ಲವೆನ್ನುವರೀತಿಯಲ್ಲಿ ಪ್ರಾರ್ಥನೆಯ ಸ್ಥಳವಾದ ಈ ದೇವಸ್ಥಾನದಲ್ಲಿ ನೆರವೇರಿಸುವ ಹಾಗೆ ನಿಶ್ಚಯವಾಯಿತು. ಗೂನರಿಗೂ ನನಗೂ ಸಂಗೀತದ ಮೂಲಕ ಪರಿಚಯ. ನಮ್ಮಿಬ್ಬರಲ್ಲಿ ಸಂಗೀತದ ವಿಚಾರಕ್ಕೆ ಯಾರದು ಅಧಿಕ ಮೋಹ ಎಂದು ಹೇಳುವುದು ಕಷ್ಟ. ನಾನೊಬ್ಬನೇ ಈ ವಿವಾಹಕ್ಕೆ ಕರೆಯಲ್ಪಟ್ಟಿರುವವನು. ಹಾಗಿರುವಲ್ಲಿ ದೇವಾಲಯದ ದೇವರಾದರೂ ಒಂದು ದಾರಿ ತೋರಿಸಿ, ಮದುವೆಯನ್ನು ನಡೆಸದೆ ನಿಲ್ಲಿಸಲಿ ಎಂಬ ಅಭಿಲಾಷೆಯೊಡನೆ ಅಲ್ಲಿಗೆ ಹೋಗುತ್ತಿರುವೆನು.' ಎಂದು ಹೇಳಿ ಮುಗಿಸಿದೆನು.

'ಶರಣ ಹೊಕ್ಕವರನ್ನು ದೇವರು ಕೈ ಬಿಡನು' ಎಂದು ಆ ಮಹಾತ್ಮರು ಮೃದುವಾಗಿ ಹೇಳಿದರು. ನಾನು ಮತ್ತೆ ಏನೂ ಹೇಳಲಿಲ್ಲ. ಮೌನವಾಗಿಯೇ ಉಳಿದ ದಾರಿಯನ್ನು ದಾಟಿದೆವು.

ಊರನ್ನು ಸೇರಿದ ಕೂಡಲೆ ಅಲ್ಲಿದ್ದ ಛತ್ರವನ್ನು ಹುಡುಕಿಕೊಂಡು

ಹೊರಟೆವು. ಛತ್ರದ ಜಗುಲಿಯ ಮೇಲೆ ಗೂನರು ಕುಳಿತುಕೊಂಡಿದ್ದರು. ತಾವು ಮಾಡುವ ಕೆಲಸಕ್ಕೆ ಅವರು ಇತರ ಸಾಕ್ಷಿಗಳನ್ನು ಬರಮಾಡಿ ಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಅವರಿಗೆ ಮನಸ್ಸಿನಲ್ಲಿ ಸ್ವಲ್ಪ ನಾಚಿಕೆಯೂ ಉಂಟಾಗಿರಬಹುದು. ಆದುದರಿಂದ ಮೋರೆಯನ್ನು ಸ್ವಭಾವಸಿದ್ಧವಾಗಿ ದ್ದುದಕ್ಕಿಂತ ಹೆಚ್ಚಾಗಿಯೇ ಸಿಂಡರಿಸಿಕೊಂಡು, 'ಯಾರು ಈ ನಿನ್ನ ಸ್ನೇಹಿತ. ದಾಡಿ, ಕೈಲಿ ಕಟ್ಟಿಗೆತುಂಡು.' ಎಂದು ಸ್ವಲ್ಪ ವ್ಯಂಗ್ಯವಾಗಿಯೇ ಕೇಳಿದರು.

'ಇವರು ಒಬ್ಬ ಸಂಗೀತ ವಿದ್ವಾಂಸರು.' ಎಂದೆ. ಅಷ್ಟರಲ್ಲೇ ಆ ಮಹಾನುಭಾವರು, 'ಇದು ಕಟ್ಟಿಗೆಯ ತುಂಡಲ್ಲ. ಇದು ಒಂದು ವೀಣೆ, ವಿಶ್ವಕರ್ಮ ನನಗೆ ಮಾಡಿಕೊಟ್ಟರು.' ಎಂದು ಹೆಮ್ಮೆಯಿಂದ ಹೇಳಿದರು.

'ಓಹೊ! ವಿಶ್ವಕರ್ಮನೆ!' ಎಂದು ಗೂನರು ವ್ಯಂಗ್ಯವಾಗಿ ನಕ್ಕು 'ನೀನೇನು ಕಿನ್ನರನೇ? ಕುದುರೆಯ ಮುಖವೇ ಇಲ್ಲವಲ್ಲ? ಸಾಕ್ಷಾತ್ ನಾರದ ಋಷಿಯೆಂದೇ ಹೇಳಿಕೊ! ಸಂಗೀತ ವಿದ್ವಾಂಸರೆ ಇವರು? ಕ್ಷೌರ ಮಾಡಿಸಿಕೊಳ್ಳುವುದಕ್ಕೆ ಸಹ ಕಾಸಿಲ್ಲವೆಂದು ಕಾಣುತ್ತೆ. ಯಾರೋ ಒಬ್ಬ ಮ್ಯಾಡ್ ಬೆಗ್ಗರ್!' ಎಂದರು.

'ಇವರು ಏನು ಹೇಳುತ್ತಾರೆ? ನನಗೆ ಅರ್ಥವೇ ಆಗುವುದಿಲ್ಲವಲ್ಲ' ಎಂದು ಆ ಮಹಾನುಭಾವರು ನನ್ನನ್ನು ಕೇಳಿದರು.

'ಅವರು ಏನೋ ಆಂಗ್ಲ ಭಾಷೆಯಲ್ಲಿ ಹೇಳಿದರು. ಅದನ್ನು ನಾವು ಗಮನಿಸಬೇಕಾದ್ದಿಲ್ಲ' ಎಂದು ನಾನು ಸಮಾಧಾನ ಹೇಳಿದೆ.

'ನನಗೆ ಕೋಪ ಬರುವುದಿಲ್ಲ. ಭಯಪಡಬೇಡಿ. ಆಂಗ್ಲ ಭಾಷೆಯು ತಿಳಿಯದೆ ಹೋದರೂ ಅವರ ದನಿಯಿಂದ ಆ ಮಾತು ನಿಂದೆ ಎಂಬುದು ಗೊತ್ತಾಗಲಿಲ್ಲವೆ? ಹಾಗಿದ್ದರೂ ನಾನು ಕೋಪಿಸಿಕೊಳ್ಳಲಿಲ್ಲವಲ್ಲ. ಭೇದವೆಣಿಸದೆ ಆ ಶಬ್ದಗಳಿಗೆ ತಮಿಳಿನಲ್ಲಿ ಅರ್ಥವನ್ನು ಹೇಳಿರಿ' ಎಂದು ಸ್ವಲ್ಪ ಅಧಿಕಾರವಾಣಿಯಲ್ಲೇ ಹೇಳಿದರು. ಮಾತನ್ನು ಮರೆಯಿಸಲು ಆಗಲಿಲ್ಲ.

'ಬೆಗ್ಗರ್ ಎಂದರೆ ತಿರುಕ....'

'ಸರಿ, ನಾನೊಬ್ಬ ತಿರುಕ. 'ಸ್ನ್ಯಾಪ್' ಎಂದರೆ?'

''ಮೂಡ್' ಎಂದರೆ ಹುಚ್ಚು' ಎಂದೆ.

'ಹಾಗೇನು?' ಅಂದರವರು. ಅವರಿಗೆ ಅರಿವಿಲ್ಲದೆ ಅವರ ಕಣ್ಣು ಗಳಿಂದ ಕಿಡಿಗಳು ಹೊರಟವು. ಒಡನೆಯೇ ಎಲ್ಲ ಮರೆಯಾಯಿತು. ಪುನಃ ಮುಖದಲ್ಲಿ ಎಂದಿನಂತೆ ಶಾಂತಿಯೂ ವಿರಾಜಿಸಿತು.

'ಗೂನರು 'ಏನು? ನಿನ್ನ 'ಸ್ನ್ಯಾಪ್ ಜಿಗ್ಗರ್' ಸ್ನೇಹಿತನು ಹುಬ್ಬುಗಂಟಿಕ್ಕಿದರೆ ನಾನು ಭಯಪಡುವೆನೆಂದು ತಿಳಿದನೋ?' ಎಂದು ಪರಿಹಾಸ್ಯ ಮಾಡುತ್ತ, ತಮ್ಮ ಬೆಳಗಿನ ಅನುಷ್ಠಾನಗಳಲ್ಲಿ ಒಂದಾದ ಚುಟ್ಟ ಸೇದುವುದಕ್ಕಾಗಿ ಉದ್ದವಾದ ಒಂದು ಚುಟ್ಟದ ತುದಿಯನ್ನು ಹೊತ್ತಿಸಿ ಬಾಯಲ್ಲಿ ಇಟ್ಟುಕೊಂಡರು.

'ಅಬ್ಬಬ್ಬಾ! ಉರಿಯುವ ಕಡ್ಡಿಯನ್ನು ಬಾಯಲ್ಲಿಟ್ಟುಕೊಳ್ಳುತ್ತಾರಲ್ಲ!' ಎಂದು ಆ ಮಹಾತ್ಮರು ಆಶ್ಚರ್ಯಪಟ್ಟರು.

ಗೂನರು ಚುಟ್ಟವನ್ನು ಬಾಯಿಂದ ತೆಗೆದು 'ನಿನ್ನ ಪಾಡಿಗೆ ನೀನಿರು' ಎಂದು ಅವರನ್ನು ಬೆದರಿಸಿ ಬಾಯಿಂದಲೂ ಮೂಗಿನಿಂದಲೂ ಹೊಗೆಯನ್ನು ಹೊರಕ್ಕೆ ಬಿಟ್ಟರು.

ಮರುಕ್ಷಣದಲ್ಲಿ ಆ ಮಹಾತ್ಮರು 'ಅಬ್ಬಬ್ಬ! ಇವರು ಬೆಂಕಿ ಹತ್ತಿಕೊಂಡು ಉರಿಯುತ್ತಿದ್ದಾರಲ್ಲ. ನೀನೇನು ಸುಮ್ಮಗೆ ಇದ್ದೀರಲ್ಲ?' ಎಂದು ಪರಿತಪಿಸಿ, 'ಅಪಕಾರಕ್ಕೆ ಬದಲು ಉಪಕಾರ ಮಾಡಬೇಡವೆ?' ಎಂದು ಹೇಳಿ ಬಳಿಯಲ್ಲೇ ಯಾರೋ ಹಲ್ಲು ತೊಳೆಯುವುದಕ್ಕಾಗಿ ತೆಗೆದುಕೊಂಡು ಹೋಗುತ್ತಿದ್ದ ಚೆಂಬನ್ನು ಕಿತ್ತುಕೊಂಡು, ಅದರಲ್ಲಿದ್ದ ನೀರನ್ನು ಗೂನರ ತಲೆಯಮೇಲೆ ಸುರಿದರು.

ತಣ್ಣೀರು ಬಿದ್ದು ಗೂನರ ದೇಹವೆಲ್ಲ ನೆನೆಯಿತು. ಗಡಗಡನೆ ನಡುಗಿದರು ಅವರು.

'ಹೆಲ್ ಅಂಡ್ ಡ್ಯಾಮ್ನೇಷನ್! ಹಾಳಾದವನೆ!' ಎಂದು ರೇಗಾಡಿದರು. 'ಬೇಕುಬೇಕೆಂದು ನನ್ನ ತಲೆಯಲ್ಲಿ ತಣ್ಣೀರು ಸುರಿದು ನನಗೆ ಉಪಕಾರ ಮಾಡುವೆನೆಂಬ ನೆವದಿಂದ ಚೂಟಾಟಿಕೆ ವಿದ್ಯೆ ನಡೆಸುತ್ತಿದ್ದೀಯಾ?' ಎಂದು ಹೇಳಿ ಇಂಗ್ಲಿಷು, ತಮಿಳು ಉರ್ದು ಈ ಮೂರು

ಭಾಷೆಗಳಲ್ಲೂ ತನಗೆ ತಿಳಿದ ಬಯ್ಗಳ ಮಳೆಯನ್ನು ಸುರಿಸಿದರು. ಆ ಮಹಾತ್ಮರು ಇದನ್ನು ಸ್ವಲ್ಪವೂ ಲಕ್ಷಿಸದೆ ವೀಣೆಯನ್ನು ಕೈಗೆ ತೆಗೆದುಕೊಂಡು ಪುನ್ನಾಗವರಾಳಿ ರಾಗದಲ್ಲಿ ಹಾಡಲಾರಂಭಿಸಿದರು.

" ಪೊನ್ನೊಡು ಮಣಿಯುಂ ಡಾನಾರ್
ಪುಲೈಯನುಂ ಕಿಳೈಂ ನೆನ್ರು
ತನ್ನೆಯುಂ ಪುಗುಳ್ದು ಕೊಂಡು
ಜಾತಿಯನ್ ಮಣಮುಂ ಶೈವಾರ್
ಮನ್ನರಾ ಯಿರುಂದು ಪೇರ್ಗಳ್
ವಗೈಕೆಟ್ಟು ಪೋವಾ ರಾಯಿನ್
ಪಿನ್ನೆಯು ಮಾರೊ ವೆನ್ರು
ಪೇಶುವಾ ರೇಶು ವಾರೆ! "

ಆನಂದವನ್ನೆ ಕರಗಿಸಿ ಸುರಿಸಿದಂತಿದ್ದ ಆ ಸಂಗೀತವನ್ನು ಕೇಳಿದೊಡನೆ ಆ ಗೂನರ ಮುಖದ ಮೇಲೆ ಮೊದಲು ನೀರನ್ನು ಸುರಿಸಿದಾಗ ಉಂಟಾದ ಮಾರ್ಪಾಡಿಗಿಂತಲೂ ನವ್ಯವಾದ ಬದಲಾವಣೆಗಳನ್ನು ಕಂಡೆನು. ಗೂನರು ಬೈಯ್ಗಳನ್ನು ನಿಲ್ಲಿಸಿ 'ಆ'ಯೆಂದು ಬಾಯ್ಬಿಟ್ಟುಕೊಂಡು ತುಸು ಹೊತ್ತು ಸುಮ್ಮನೆ ನಿಂತಿದ್ದರು. ಅನಂತರ ತಮ್ಮ ಮೇಲೆ ಮುತ್ತಿಗೆ ಹಾಕಲು ಬಂದಿರುವ ಸೌಜನ್ಯವನ್ನು ಎದುರಿಸಿ ಹೋರಾಡುವುದರಿಂದ ಉಸಿರು ಕಟ್ಟಿಹೋಗಿ ಒದ್ದಾಡುತ್ತಿರುವವರ ಹಾಗೆ ಎರಡು ಮೂರು ಸಲ ದೇಹವನ್ನು ಅಲ್ಲಾಡಿಸಿ ನಿಟ್ಟುಸಿರು ಬಿಟ್ಟರು. ಪುನಃ ಸ್ವಲ್ಪವೂ ಅಲುಗಾಡದೆ ಶಾಂತವಾಗಿ ನಿಂತರು. ಅದಾದ ಮೇಲೆ ತನ್ನನ್ನು ತಾನೇ ಮರೆತು 'ಆಹಾ! ಆಹಾ!' ಎಂದು ಎರಡು ಸಾರೆ ಮೆಲ್ಲಗೆ ಉಸಿರಿದರು. ಅನಂತರ ಥಟ್ಟನೆ ಎಚ್ಚೆತ್ತವರ ಹಾಗೆ ತಮ್ಮ ಸ್ವಭಾವಸಿದ್ಧವಾದ ಸಿಡುಕು ಮೋರೆಯನ್ನು ತೋರಿಸಿಕೊಂಡು 'ನಿನ್ನ ಸ್ನೇಹಿತನು ಭಲೆ ಆಸಾಮಿ. ಕಟ್ಟಿಗೆಯ ತುಂಡಿನಂತಿರುವ ವೀಣೆಯನ್ನಿಟ್ಟುಕೊಂಡು ನನ್ನ ಕೋಪವನ್ನು ಮರೆಯಿಸಿ ನನ್ನ ಕೈಲಿ 'ಶಾಬಾಷ್' ಅನ್ನಿಸಿಬಿಟ್ಟ. ಇನ್ನು ಸ್ವಲ್ಪ ಹೊತ್ತು ಇಲ್ಲೇ ನಿಂತಿದ್ದೆ ಆದರೆ ನನ್ನ ಹಣವೆಲ್ಲವನ್ನು ಅವನಿಗೆ ಕೊಡುವ ಹಾಗೆ ಮಾಡಿಬಿಡುವನು. ನಾನು ಓಡಿ ಹೋಗುವೆನು. ಎಂದು

ಹೇಳಿ ಛತ್ರದೊಳಕ್ಕೆ ಹೋಗಿ ಬಾಗಿಲನ್ನು 'ಪಟಾರನೆ' ಮುಚ್ಚಿ ಒಳಗೆ ಅಗಣಿಯನ್ನು ಹಾಕಿಕೊಂಡರು.

ಆ ಮಹಾತ್ಮರು ಹಾಡುವುದನ್ನು ನಿಲ್ಲಿಸಿ ನಸುನಗೆಯಿಂದ ನನ್ನ ಕಡೆ ನೋಡಿ 'ಬನ್ನಿ. ದೇವಸ್ಥಾನಕ್ಕೆ ಹೋಗಿ ದೇವರ ದರ್ಶನವನ್ನು ಮಾಡಿಕೊಂಡು ಬರೋಣ' ಎಂದರು.

'ಸ್ವಾಮಿ, ಹಾಗೆಯೆ ಆಗಲಿ. ಇನ್ನು ನೀವು ಮಾಡುವ ಕಟ್ಟಳೆಗಳಿಗೆಲ್ಲ ನಾನು ತಲೆಬಾಗುವೆನು. ನನಗೊಂದು ವರ ದಯಪಾಲಿಸಬೇಕು' ಎಂದು ನಾನು ಪ್ರಾರ್ಥಿಸಿದೆ.

'ಏನು ವರ ಬೇಕು? ಕೇಳಿರಿ'

'ಈ ದಿನ ನಡೆಯುವ ಮುಹೂರ್ತದ ಸಮಯಕ್ಕೆ ಓಲಗದವನಿಗೆ ನಿಲ್ಲಿಸಲು ಹೇಳಿ ತಾವೇ ದಯಮಾಡಿ ಹಾಡಬೇಕು.'

'ಹಾಗೆಯೆ ಆಗಲಿ'

* * * * *

ನಾವು ಪುಷ್ಕರಣಿಯಲ್ಲಿ ಸ್ನಾನ ಮಾಡಿ ಅನುಷ್ಠಾನಗಳನ್ನೆಲ್ಲ ತೀರಿಸಿ, ದೇವರ ದರ್ಶನ ಮಾಡಿಕೊಂಡು ಹೊರಗಿನ ಪ್ರಾಕಾರಕ್ಕೆ ಬರುವ ವೇಳೆಗೆ ಮುಹೂರ್ತದ ಸಮಯವು ಹತ್ತಿರವಾಯಿತು. ಆ ಪ್ರಾಕಾರದ ಒಂದು ಮೂಲೆಯಲ್ಲಿ ಈ ರಸಾಭಾಸದ ಮದುವೆಯು ಪ್ರಾರಂಭವಾಯಿತು. ಮದುವೆಗಂಡು ಒಂದು ಕೋಲಿನ ಸಹಾಯದಿಂದ ನಡಕೊಂಡು ಬಂದು ಹಸೆಯ ಮೇಲೆ ಕುಳಿತರು. ಸಾಲಪತ್ರವನ್ನೂ ಫೌಂಟನ್‌ಪೆನ್ನನ್ನೂ ಸೊಂಟದಿಂದ ತೆಗೆದು ಒಂದು ಬದಿಗೆ ಇರಿಸಿದರು. ಅವರ ದತ್ತುಮಗ ಕೈಕಟ್ಟಿಕೊಂಡು ಒಂದು ಕಡೆಗೆ ನಿಂತ. ಅವನು ಕೈಕಟ್ಟಿ ನಿಂತಿರುವುದನ್ನು ನೋಡಿದರೆ, ಅದು ಮರ್ಯಾದೆಗಾಗಿ ಅಲ್ಲವೆಂದೂ ತನ್ನನ್ನು ಮೀರಿ ಅವುಗಳೆಲ್ಲಾದರೂ ಗೂನರ ಬೆನ್ನುಮೂಳೆಯನ್ನು ಪುಡಿ ಪುಡಿ ಮಾಡಾವೆಂದು ಎಚ್ಚರಿಕೆಯಿಂದ ಇರುವ ಹಾಗೆ ತೋರುತ್ತಿತ್ತು. ಮರಕತವೊ! ಪಾಪ! ವಸಂತಕಾಲದಲ್ಲಿ ನಾಚಿಕೆಯೊಡನೆ ಹೊರಗೆ ಇಣಕಿ ನೋಡುವ ತಳಿರಿನ ಹಾಗೆ ಕೋಮಲ ದೇಹವುಳ್ಳ ಆ ಸುಂದರಿಯು ಕಣ್ಣುಗಳಲ್ಲಿ ನೀರು ಸುರಿಸುತ್ತ, ಹಲ್ಲುಗಳಿಂದ

ತುಟಿಯನ್ನು ಕಚ್ಚಿ ತನ್ನ ದುಃಖವನ್ನು ಅಡಿಗಿಸಿಕೊಂಡು ಹಸೆಯ ಮೇಲೆ ಸಾಧ್ಯವಾದಷ್ಟು ದೂರ ಸರಿದು ಕುಳಿತಿದ್ದಳು. ಅವಳ ತಂದೆ ತಾಯಿ, ಇನ್ನು ದೇವರೇ ನಮ್ಮ ಮಗಳನ್ನು ಕಾಪಾಡಬೇಕೆಂದು ಎಣಿಸಿ, ದೇವಾಲಯದ ದೇವರನ್ನೇ ದೃಷ್ಟಿಸಿ ನೋಡುತ್ತಿದ್ದರು. ಪುರೋಹಿತರೂ ಓಲಗದವರೂ ಈ ಬಗೆಯ ವೈಭವವನ್ನು ನೋಡಿ ಆಶ್ಚರ್ಯದಿಂದ ಏನೂ ತೋಚದವರಂತೆ ದಿಗ್ಭ್ರಮೆಗೊಳಗಾಗಿದ್ದರು.

ಆ ಸಮಯದಲ್ಲಿ ನಾನು ಆ ಮಹಾತ್ಮರನ್ನು ಕುರಿತು 'ಸ್ವಾಮಿ! ಈಗ ಕೃಪೆಮಾಡಿ ಒಂದು ಹಾಡು ಹೇಳಬೇಕು' ಎಂದು ಪ್ರಾರ್ಥಿಸಿದೆ. ಅವರು ಅದೇ ಕ್ಷಣದಲ್ಲಿ ತಮ್ಮ ಸ್ವರ್ಣಕಂಠದಿಂದ ಹೇಳತೊಡಗಿದರು;

"ಕಲ್ಲಾರ್ಕಂ ಕಟ್ರವರ್ಕಂ
ಕಳಿಪ್ಪರುಳುಂ ಕಳಿಪ್ಪೇ!"

ಮೊದಲು ಸ್ವರಗಳನ್ನು ಅವರು ಅಂತರದಲ್ಲಿ ಸುರಿಸಿದೊಡನೆ ಗೂನರು ಬೆಚ್ಚಿಬಿದ್ದು 'ಇವನು ಇಲ್ಲಿಗೂ ಬಂದನೇ?' ಎಂದು ಗೊಣಗುತ್ತ ಹಸೆಯನ್ನು ಬಿಟ್ಟು ಏಳಲೆತ್ನಿಸಿದರು. ಆದರೆ ಹಾಗೆ ಮಾಡಲು ಅವರಿಗೆ ಶಕ್ತಿಯಿಲ್ಲದುದರಿಂದ ಅಲ್ಲೇ ಕುಳಿತು ಹಾಡನ್ನು ಕೇಳತೊಡಗಿದರು. ಅಲ್ಲಿದ್ದ ಒಬ್ಬೊಬ್ಬರೂ ಸಂಗೀತದ ಸುಳಿಯಲ್ಲಿ ಕಟ್ಟುಬಿದ್ದು ಮುಖವನ್ನು ಬಗೆಬಗೆಯಾಗಿ ತೋರಿದರು. ಆದರೆ ನನ್ನ ಗಮನವೆಲ್ಲ ಆ ಮದುಮಗನ ಮೇಲೆ ಇತ್ತು. ಮಹಾತ್ಮರು ಪುನಃ ಹಾಡತೊಡಗಿದರು. 'ಹಾ ಹಾ! ಆಹಾ!' ಎಂದರು ಗೂನರು. ತಮ್ಮ ದೃಷ್ಟಿ ಮತ್ತು ತಮ್ಮ ಬಾಲ್ಯದೆಶೆ ಇವೆಲ್ಲವೂ ಮರಳಿ ಬಂದಂತೆ ಕಣ್ಣುಗಳನ್ನು ಬಿಟ್ಟು ಬಿಟ್ಟು ನೋಡಿದರು.

"ವಲ್ಲಾರ್ಕ್ಕುಂ ಮಾಟ್ಟಾರ್ಕಂ
ವರವಳಿಕ್ಕುಂ ವರಮೇ!
ಮದಿಯಾರ್ಕಂ ಮದಿಪ್ಪವರ್ಕಂ
ಮದಿಕೊಡುಕ್ಕಂ ಮದಿಯೆ!"

ಗೂನರು 'ಆಹಾ! ಆಹಾ!' ಎಂದು ನಕ್ಕರು. 'ಇವನು ಮರಕತವನ್ನು ಮದುವೆಯಾಗುವುದು ವಾಸ್ತವವೆ? ಈ ಮುದುಕನಿಗೆ ಇವಳು ಅಡಿಯಾಳಾಗುವಳೆಂದಲ್ಲವೆ ನೀವೆಲ್ಲ ಬಗೆಯುತ್ತಿರುವುದು? ನಿಜವಾಗಿ ಹೇಳಿ!' ಎಂದು ನನ್ನ ಕಡೆಗೆ ತಿರುಗಿ ವ್ಯಂಗ್ಯವಾಗಿ ನಕ್ಕರು.

"ನಲ್ಲಾರ್ಕ್ಕುಂ ಪೊಲ್ಲಾರ್ಕ್ಕುಂ
ನಡುನಿನ್ರ ನಡುವೆ!"

ಹಸೆಮಣೆಯಲ್ಲಿ ಯಾವುದೋ ಒಂದು ಮೊಳೆಯು ತಮ್ಮನ್ನು ಚುಚ್ಚಿದ ಹಾಗೆ ಥಟಕ್ಕನೆ ಬೆಚ್ಚಿಬಿದ್ದು ಗೂನರು ಅಲ್ಲಿಂದ ಎದ್ದು ದೂರಕ್ಕೆ ಸರಿದು ನಿಂತರು. 'ಏನಪ್ಪ ಹುಡುಗ! ದಡಿ ಬ್ರಹ್ಮಚಾರಿಯ ಹಾಗೆ ನಿಂತಿದ್ದೀಯಲ್ಲ! ಹಸೆಯಲ್ಲಿ ಕೂಡುವುದಕ್ಕೇನು?' ಎಂದು ತಮ್ಮ ದತ್ತುಮಗನನ್ನು ಗದರಿಸಿದರು. ನಾನು ಹುಡುಗನ ಕೈಯನ್ನು ಹಿಡಿದು ಅವನನ್ನು ಹಸೆಯಲ್ಲಿ ಕುಳ್ಳಿರಿಸಿದೆ.

"ನರರ್ಗಳುಕ್ಕಂ ಸುರರ್ಗಳಕ್ಕುಂ
ನಲಂಕುಡುಕ್ಕುಂ ನಲಮೋ!"

'ಪುರೋಹಿತರೆ! ಏನು ನೋಡುತ್ತಿದ್ದೀರಿ ಗಂಡೂ ಹೆಣ್ಣೂ ಕಾದು ನಿಂತಿರುವುದು ಕಾಣುವುದಿಲ್ಲವೆ ನಿಮಗೆ? ಮಂತ್ರ ಹೇಳುವುದಕ್ಕೇನು?' ಎಂದು ಗೂನರು ಕೂಗಾಡಿದರು.

ಅವರು ಹೇಳಿದ್ದು ಸಾಲದೆಂದು ನನ್ನ ಕೈಲಾದುದನ್ನು ನಾನೂ ಮಾಡಿದೆ. 'ಪುರೋಹಿತರೇ! ಈ ಹಾಡು ಮುಗಿಯುವುದರೊಳಗಾಗಿ ಸಪ್ತಪದಿ ಮಾತ್ರ ಆಗಿ ಮದುವೆ ಮುಗಿಯದೆ ಹೋದರೆ ನಿಮ್ಮ ಸಂಭಾವನೆಗೆ ನಾನೂ ಒಬ್ಬ ಪಾಲುಗಾರ' ಎಂದೆ. ಮಹಾತ್ಮರ ಕಡೆಗೆ ತಿರುಗಿ ನಾನು 'ಸ್ವಾಮಿ ಹಾಡನ್ನು ಮಾತ್ರ ನಿಲ್ಲಿಸಬೇಡಿರಿ' ಎಂದು ಪ್ರಾರ್ಥಿಸಿದೆನು.

"ಭಕ್ತಾಪಾಯ ಭುಜಂಗಗಾರುಡಮಣಿಃ
ತ್ರೈಲೋಕ್ಯ ರಕ್ಷಾಮಣಿಃ
ಗೋಪೀಲೋಚನ ಚಾತಕಾಂಬುಧಮಣಿಃ
ಸೌಂದರ್ಯಮುದ್ರಾಮಣಿಃ
ಯಃ ಕಾಂತಾಮಣಿ ರುಕ್ಮಿಣೀ ಘನಕುಚ
ದ್ವಂದ್ವೈಕಭೂಷಾಮಣಿಃ
ಶ್ರೇಯೋದೇವಶಿಖಾಮಣಿ ದಿಶತುನೋ
ಗೋಪಾಲ ಚೂಡಾಮಣಿಃ"

ಬಹಳ ವೇಗದಲ್ಲಿ ಮದುವೆ ಸಾಗುತ್ತಿತ್ತು. 'ಎಲ್ಲಿ, ಆ ಲೇಖಣಿಕೆ?'

ಎಂದು ಗೂಸರ್ಯ ಕೂಗಿದರು. ಸಾಲಪತ್ರವನ್ನು ತೆಗೆದು 'ನನ್ನ ಸ್ವಿಕಾರ ಪುತ್ರನಿಗೆ ನಿಮ್ಮ ಹುಡುಗೆ ಮರಕತಳನ್ನು ಕೊಟ್ಟು ವಿವಾಹ ಮಾಡಿ ಕೊಡಲು ನೀವೂ ನಿಮ್ಮ ಕುಟುಂಬವೂ ಸಮ್ಮತಿಸಿದುದಕ್ಕೆ ಪ್ರತಿಫಲ ವಾಗಿ ಈ ಸಾಲ ಪೂರ್ಣವಾಗಿ ತೀರಿದೆ.' ಎಂದು ಬರೆದು ರುಜು ಮಾಡಿ ದರು. ಓಲಗದವರು ಬಂದಿದ್ದು ಏನೂ ಕೆಲಸ ಮಾಡದೆ ದಕ್ಷಿಣೆಯನ್ನೇಕೆ ಪಡೆಯಬೇಕೆಂದು ಅವರೆಲ್ಲರನ್ನೂ ಆ ಪತ್ರ ತೀರಿದ್ದಕ್ಕೆ ಸಾಕ್ಷಿಹಾಕು ವಂತೆ ಮಾಡಿದೆ. ಪುರೋಹಿತರ ಕೈಲೂ ರುಜು ಹಾಕಿಸಿ ಪತ್ರವನ್ನು ಭದ್ರ ವಾಗಿ ನನ್ನ ಕೈಯಲ್ಲಿ ಇಟ್ಟುಕೊಂಡೆ. ವಿವಾಹಿತ ದಂಪತಿಗಳು, ಅವರ ತಾಯಿ ತಂದೆ ಇವರಲ್ಲಿ ಹೆಚ್ಚಾಗಿ ಆನಂದಸಾಗರದಲ್ಲಿ ಮುಳುಗಿದವರು ಯಾರು ಎಂದು ಹೇಳಲು ಕಷ್ಟವಾಗಿತ್ತು.

'ಶ್ರೀರಾಮಚಂದ್ರನಿಗೆ ಜಯಮಂಗಳಂ-ನಲ್ಲ
ದಿವ್ಯಮುಗ ಬಾಲನಿಗೆ ಶುಭಮಂಗಳಂ'

ವಿವಾಹವು ಮುಗಿಯಿತು. ಗೂಸರು ಆಗ ಒಂದು ಚಮತ್ಕಾರ ಮಾಡಿದರು. 'ಈಗಲ್ಲವೆ ಎಲ್ಲರಿಗೂ ತೃಪ್ತಿ. ಹೀಗೆ ಹಣದ ಆಸೆ ಹಿಡಿದ ನಿಮ್ಮ ಮಾತು ಕೇಳಿ ನಿಮ್ಮ ಹೆಣ್ಣನ್ನು ನಾನು ಮದುವೆಯಾಗಿದ್ದರೆ ಮದುವೆ ಹೀಗೆ ತಮಾಷೆಯಾಗಿ ಮುಗಿಯುತ್ತಿತ್ತೆ? ನಿಮಗೆ ವಯಸ್ಸಾಗಿ ಹಣ ಲಾಭ ಪಾಪ ಪುಣ್ಯ, ಸುಖದುಃಖ ಇವು ಸ್ವಲ್ಪವಾದರೂ ನಿಮಗೆ ತಿಳಿಯಬೇಡವೆ?' ಎಂದು ಹೇಳಿದರು.

ಈ ಮಾತು ಕೇಳಿ ಮರಕತಳ ತಂದೆಯೂ ನಾನೂ ಆಶ್ಚರ್ಯಗೊಂಡು ನಿಂತೆವು. ಹಾಡು ನಿಂತುಹೋಯಿತಲ್ಲ ಎಂದಳು. ನಾನು ಹಿಂದಕ್ಕೆ ತಿರುಗಿ ನೋಡಿದೆ. ಆ ಮಹಾತ್ಮರು ಕಾಣಲಿಲ್ಲ. 'ಮಾಧ್ಯಾಹ್ನಿಕ ಸಮಯ ವಾಯಿತೆಂದು ಹೇಳಿ ಈಗ ತಾನೇ ಎದ್ದು ಹೋದರು' ಎಂದು ಪುರೋ ಹಿತರು ಹೇಳಿದರು. ಪುಷ್ಕರಣಿಯ ಕಡೆಗೆ ಓಡಿಹೋಗಿ ಅಲ್ಲೆಲ್ಲ ನೋಡಿದೆ. ದೇವಸ್ಥಾನವನ್ನೆಲ್ಲ ಹುಡುಕಿದ್ದಾಯಿತು. ಅದರ ಸುತ್ತುಮುತ್ತೂ ನೋಡಿದ್ದಾಯಿತು. ಆದರೆ ಅವರು ಕಣ್ಣಿಗೆ ಬೀಳಲಿಲ್ಲ; ನಾನೇನು ಮಾಡಲಿ?

† † † †

ನಾಲ್ಕು ದಿನಗಳು ಕಳೆದವು. ಇನ್ನೂ ಆ ಮಹಾತ್ಮರನ್ನು ಕಾಣ ಲಿಲ್ಲ. ಮರಕತವೂ ಅವಳ ಗಂಡನೂ ಅವಳ ತಂದೆಯ ಮನೆಯಲ್ಲಿ ಸುಖ ವಾಗಿದ್ದಾರೆ. ಸಾಲಪತ್ರ ನನ್ನ ವಶದಲ್ಲಿದೆ. ಈ ದಿನ ಬೆಳಿಗ್ಗೆ ಗೂನರ ಕಡೆ ಯಿಂದ ನನಗೆ 'ಲಾಯರ್ ನೋಟೀಸು' ಬಂದಿದೆ. ನಾನು ಕಲಹಪ್ರಿಯ ನಾದ ಯಾರೊ ಒಬ್ಬ ಮಾಯಾವಿಯನ್ನು ಕರೆತಂದು ಅವರಿಗೂ ಅವರ ದತ್ತುಮಗನಿಗೂ ಜಗಳ ತಂದುಹಾಕಿ ಅವರನ್ನು ವಂಚಿಸಿ ಸಾಲಪತ್ರ ದಲ್ಲಿ ರುಜು ಹಾಕಿಸಿದೆನಂತೆ. ಅದಕ್ಕಾಗಿ ಅವರು ನನ್ನ ಮೇಲೆ ಒಂದು ಲಕ್ಷ ರೂಪಾಯಿಗೆ ನಷ್ಟದ ದಾವೆ ಮಾಡುವರಂತೆ. ಆದರೆ ಆ ಕಲಹ ಪ್ರಿಯನಾದ ಮಾಯಾವಿಯನ್ನು ಕರೆತಂದು ಪುನಃ ಒಂದು ಘಂಟೆ ಹೊತ್ತು ಹಾಡಿಸಿದರೆ ಎಲ್ಲವನ್ನೂ ಮನ್ನಿಸಲು ಸಿದ್ಧರಾಗಿರುವರಂತೆ.

ಅವರು ನನ್ನನ್ನು ಮನ್ನಿಸಬೇಕಾಗಿಲ್ಲ. ದಾವೆ ಮಾಡಲಿ. ನಡೆದ ಮಾತನ್ನು ನಿರೂಪಿಸುವುದಕ್ಕೆ ನಿಷ್ಪಕ್ಷಪಾತಿಗಳಾದ ಪುರೋಹಿತರು, ಓಲಗದವರು ಇವರೇ ಸಾಕ್ಷಿಗಳಿದ್ದಾರೆ. ಆದರೆ ಆ ಮಹಾತ್ಮರ ಸಂಗೀತ ವನ್ನು ಪುನಃ ಕೇಳಬೇಕೆಂಬ ಆಸೆ ನನ್ನನ್ನೇ ರಾತ್ರಿಹಗಲು ಪೀಡಿಸುತ್ತಿದೆ. ಅದಕ್ಕೆಲ್ಲಿ ಮಾರ್ಗ? ಈ ವಿಷಯದಲ್ಲಿ ನನಗೆ ಸಹಾಯ ಮಾಡುವವರಾರು? ನೀವಾರಾದರೂ ಆ ಮಹಾತ್ಮರನ್ನು ನೋಡಿರುವಿರಾ? ನೋಡುವುದಕ್ಕೆ ಅವರು ಸುಮಾರು ಇಪ್ಪತ್ತೈದು ವರ್ಷ ವಯಸ್ಸಾದವರಂತಿದ್ದಾರೆ. ಎಳೆ ಮಕ್ಕಳಂತೆ ನಿಷ್ಕಳಂಕವಾದ ಮುಖ, ನಡುವಿನಲ್ಲಿ ಸಣ್ಣ ಅಂಚಿನ ಪಂಚೆ ಮತ್ತು ಎದೆಯ ಮೇಲೆ ಜಿಂಕೆಚರ್ಮದ ಯಜ್ಞೋಪವೀತ ಇದೆ. ಕೈಲಿ ಕಾಡುಮರದ ವೀಣೆಯೊಂದಿದೆ. ತಲೆಯಲ್ಲಿ ಜಡೆ—ಅವರೆ, ಇದನ್ನೆಲ್ಲ ಮೊದಲೇ ಒಂದು ಸಲ ನಿಮಗೆ ಹೇಳಿರುವೆನಲ್ಲವೆ? ಅವರನ್ನು ಎಲ್ಲಿ ಯಾದರೂ ನೋಡಿರುವಿರೋ? ಮದರಾಸಿನಲ್ಲಿರುವ ಎಲ್ಲ ಸಂಗೀತ ಸಭೆ ಗಳಲ್ಲೂ ವಿಚಾರಿಸಿ ನೋಡಿದೆ. ಅಲ್ಲೆಲ್ಲ ತಮ್ಮ ಮುಂದಿನ ಸಭೆಯ ಸೂಚನೆಯನ್ನು ತೋರಿಸಿದರೇ ಹೊರತು, ಈ ಮಹಾತ್ಮರ ವಿಚಾರ ತಿಳಿಸಲಿಲ್ಲ. ಏನು ಮಾಡಲಿ ನಾನು! ನೀವು ಯಾರಾದರೂ ಅವರನ್ನು ನೋಡಿರುವಿರೋ?

---

# ಬಂಜೆಯ ಮಗ

ಶ್ರೀ. ನ. ಪಿಚ್ಚಮೂರ್ತಿ, ಬಿ. ಎ., ಬಿ. ಎಲ್. ಆಧುನಿಕ ತಮಿಳು ಕತೆಗಾರರಲ್ಲಿ ಶ್ರೀಯುತರ ಸ್ಥಾನ ಉತ್ತಮವಾದುದು. ಇವರ ಕತೆಗಳು ಉತ್ತಮತರದವು. ಇವರು ಬಾಳಿನ ಸಣ್ಣಪುಟ್ಟ ಮಾತುಪ್ರಸಂಗ ಗಳನ್ನೂ ಒಳ್ಳೇ ಜಾಣ್ಮೆಯಿಂದ ಚಿತ್ರಿಸಬಲ್ಲರು. ಕತೆಗಳಲ್ಲದೆ ಚಿಕ್ಕಚಿಕ್ಕ ಕಾವ್ಯಗಳನ್ನೂ ಗದ್ಯ ಗ್ರಂಥಗಳನ್ನೂ ಬರೆದಿದಾರೆ. ತಮಿಳಿನ ಎಲ್ಲಾ ಮುಖ್ಯ ಪತ್ರಿಕೆಗಳಲ್ಲೂ ಇವರ ಬರೆಹ ಬರುತ್ತವೆ. ಬಹಳ ದಿನ ಗುಪ್ತ-ನಾಮದಿಂದ ಬರೆಯುತ್ತಿದ್ದರು. ಈಚಿನ ಬರವಣಿಗೆಯಿಂದ ತಮಿಳು ನುಡಿಯ ಪವಿತ್ರತೆ ಅಳಿಯುತ್ತಿದೆ ಎಂದೆನ್ನುವ ಹಳೆಯ ಜನರನ್ನು ಪೂರಾ ವಿರೋಧಿಸಿದಾರೆ. ಇವರದು ಕುಂಭಕೋಣ. ವಕೀಲಿ ಮಾಡಿ ಉಳಿದ ವೇಳೆಯೆಲ್ಲ ಸಾಹಿತ್ಯ ಸೇವೆಗೇ ಮೀಸಲು ಮಾಡಿದಾರೆ.

'ಬಂಜೆಯ ಮಗ' ದಲ್ಲಿ ಇವರ ಕೈವಾಡದ ಚಮತ್ಕಾರ ಚೆನ್ನಾಗಿ ಅರಳಿದೆ. ಅವರ ಕಲಾಚಾತುರ್ಯಕ್ಕೆ ಇದೊಂದು ಒಳ್ಳೆ ಉದಾಹರಣೆ.

'ಬಾಜೆಯ ಮಗನಹಾಗೆ' ಅನ್ನುತ್ತಾರೆ. ಉಂಟೇ? ಇದು ನಡೆಯ ತಕ್ಕ ಮಾತಲ್ಲ ಅನ್ನಲು ನಾವು ಸಿದ್ಧರಾಗಿಲ್ಲ. ನಮ್ಮ ಕಣ್ಣೆದುರಿನಲ್ಲೇ ನಡೆಯಿತೆಂದಮೇಲೆ ಮಾತೇನುಂಟು? ಹಿಂದಿನ ದಿನ ರಾತ್ರಿಯವರೆಗೆ ಅವರಿಗೆ ಮಕ್ಕಳಿರಲಿಲ್ಲ. ಮರುದಿನ ಬೆಳಗ್ಗೆ ಹತ್ತು ಗಂಟೆಗೆ ಒಂದು ಚಿಕ್ಕ ಹಸುಮಗು ಇತ್ತೆಂದಮೇಲೆ! ಆ ಮಗುವೂ ಸಾಮಾನ್ಯವಾಗಿ ಬಂದದ್ದಲ್ಲ. ಊರಿನಲ್ಲಿ ದೊಡ್ಡ ಕೋಲಾಹಲವನ್ನೂ ಗಾಳಿ ಸಮಾಚಾರ ವನ್ನೂ ಮೊಕದ್ದಮೆಯನ್ನೂ ಎಬ್ಬಿಸಿಕೊಂಡೇ ಬಂತು.

ಆ ಮಗುವಿಗೆ ಕೃಷ್ಣನೆಂದು ಹೆಸರಿಟ್ಟರು. ತಕ್ಕ ಹೆಸರು! ಏಕೆಂದರೆ ಮಗು ನೀಲಮೇಘದ ಹಾಗೆಯೇ ಇತ್ತು. ಆದರೆ ಆ ಹೆಸರ ನ್ನಿಟ್ಟುದಕ್ಕೆ ಬಣ್ಣವು ಕಾರಣವಲ್ಲವೆಂದು ಊರ ಜನರ ಅಭಿಪ್ರಾಯ.

ತಮಗೆ ಇನ್ನುಮೇಲೆ ಮಕ್ಕಳಾದಾರೆಂಬ ನಂಬಿಗೆಯನ್ನು ಮುಕುಂದರಾಯರು ತೊರೆಯುವ ಸಮಯ; ಧರ್ಮಕಾರ್ಯಗಳಿಗೆ ತೊಡಗುವ ಸಮಯ. ಅವರು ಬರೀ ಬರೆಹದ ಕೂಲಿ ಸಂಪಾದಿಸುವವರೆ. ಅವರು ವಾಸವಾಗಿದ್ದ ಬೀದಿಯಲ್ಲಿ ಸಾಕಷ್ಟು ಜನ ಹಣವಂತರುಂಟು. ಇದ್ದರೂ ನದೀತೀರದ ಮಠದ ಸ್ಥಿತಿಯನ್ನು ಕುರಿತು ರಾಯರಿಗೆ ಮಾತ್ರವೆ ಅಕ್ಕರೆ ಹುಟ್ಟಿದ್ದು. ಬಹಳ ದಿನಗಳ ಮುಂಚೆ ಆ ಮಠವು ಅಲ್ಲಲ್ಲಿ ಕುಸಿದು, ಹಂಚುಗಳೊಡೆದು ಹಾಳುಬಿದ್ದಿತ್ತು. ನದೀತೀರಕ್ಕೆ ಸ್ನಾನಮಾಡಲು ಹೋಗುವಾಗ ಅರಳೀಮರದಿಂದ ಗಾಳಿಯೆದ್ದು, ಹಂಚು ಗಳು ಹೊರಳಿಹೋಗಿ ಆಗಿದ್ದ ಕಂಡಿಗಳಿಂದ ಮಠದೊಳಕ್ಕೆ ನುಗ್ಗಿ ಬೀಸುತ್ತಿರುವುದನ್ನು ನೋಡಿದಾಗಲೆಲ್ಲಾ, ಅವರಿಗೆ ತಮ್ಮ ಬದುಕಿನ ಹಾಗೆಯೇ ಮಠವೂ ಹಾಳಾಗಿ ಹೋಗಿಬಿಡುವುದಲ್ಲಾ ಎಂಬ ಭಯ ವಾಗುತ್ತಿತ್ತು.

ಆದುದರಿಂದ ಧರ್ಮಕಾರ್ಯಗಳನ್ನು ಮಾಡಲು ಪ್ರಾರಂಭಿಸಿ ದೊಡನೆ ಮಠವನ್ನು ಒಪ್ಪಮಾಡಿ ಹಂಚುಹೊದಿಸಿದರು. ಅಷ್ಟಕ್ಕೇ ಸುಮ್ಮನಾಗಲಿಲ್ಲ. ಸುಣ್ಣ ತರಿಸಿ ಮಠಕ್ಕೆಲ್ಲ ಹೊಡೆಯುವಂತೆ ಹೇಳಿದರು. ಸುಣ್ಣ ಹೊಡೆಸಿದಮೇಲೆ ಬೇರೆಯೊಂದು ಆಸೆ ಹುಟ್ಟಿತು. ಗೋಡೆಯನ್ನು

ಬರಿದಾಗಿ ಬಿಡಬಾರದೆಂದು ತಂಜಾವೂರಿನ ಬಣ್ಣಗಾರನೊಬ್ಬನನ್ನು ಹಿಡಿದರು. ಪಾರ್ವತೀ ಪರಮೇಶ್ವರ, ರಾಮಪಟ್ಟಾಭಿಷೇಕ, ಬ್ರಹ್ಮಸರಸ್ವತಿ, ರುಕ್ಮಿಣೀ ಸತ್ಯಭಾಮಾ ಸಹಿತನಾದ ಕೃಷ್ಣ, ಶುಕಬ್ರಹ್ಮ, ಗರುಡ, ಹನುಮಂತ— ಈ ಚಿತ್ರಗಳನ್ನು ಗೋಡೆಯ ಮೇಲೆ ಬರೆಸುವುದೆಂದು ತೀರ್ಮಾನಿಸಿದರು. ಈ ಚಿತ್ರಗಳನ್ನು ಬರೆಯುವಾಗಂತೂ ಮುಕುಂದ ರಾಯರಿಗೆ ನದೀತೀರದ ಮಠದಲ್ಲಿಯೇ ವಾಸವೆಂದು ಹೇಳಬಹುದು. ಬರಿಯ ಗೋಡೆಯಮೇಲೆ ಚಿತ್ರಗಳು ಮೂಡುವುದನ್ನು ನೋಡುವುದರಿಂದಲೊ ಏನೊ ಅವರಿಗೊಂದು ಆಂತರಿಕಾನಂದವುಂಟಾಗುತ್ತಿತ್ತು. ಈ ಚಿತ್ರಗಳನ್ನು ನೋಡುವುದಕ್ಕೆ ಏನು ಸಂದಣಿ! ಏನು ಸಂದಣಿ! ಹೆಂಗುಸರೂ ಮಕ್ಕಳೂ ಅವನ್ನು ವರ್ಣಿಸುವುದೆಷ್ಟು!

ಚಿತ್ರಗಾರನು ರುಕ್ಮಿಣಿ ಸತ್ಯಭಾಮಾ ಸಹಿತನಾದ ಕೃಷ್ಣನನ್ನು ಬರೆಯುತ್ತಿದ್ದ ಸನ್ನಿವೇಶ. ನೀಲವರ್ಣದಲ್ಲಿ ಕೃಷ್ಣನನ್ನು ತುಂಬಿಸಿ ಮುಗಿಸಿದ. ಸಂಪ್ರದಾಯವನ್ನನುಸರಿಸಿ ಕೃಷ್ಣನಿಗೆ ಹಳದಿ ಬಣ್ಣದ ಪೀತಾಂಬರ ಉಡಿಸಿತ್ತು. ಮೊಣಕಾಲವರೆಗೂ ದುಂಡುಮಾಲೆಯೂ ಅಂಗವಸ್ತ್ರವೂ ಇಳಿಬಿಟ್ಟಿತ್ತು. ನವಿಲುಗರಿ ಧರಿಸಿದ ತಲೆ ಅಂದವಾಗಿ ಬಲಗಡೆಗೆ ಬಾಗಿತ್ತು. ಎರಡು ಕೈಯೂ ಸೊಂಟದಮೇಲೆ ಊರಿತ್ತು, ವಾಸ್ತವವಾಗಿಯೂ ಎಲ್ಲಾ ಚಿತ್ರಗಳಿಗಿಂತ ಕೃಷ್ಣನ ಪಟದಲ್ಲಿಯೇ ಜೀವಕಳೆ ಹೆಚ್ಚಾಗಿ ಹೊರ ಚಿಮ್ಮುತ್ತಿದ್ದುದು. ಎಂದಿನಂತೆ ತಮಾಷೆಯನ್ನು ನೋಡಲು ಯಾರು ಯಾರೋ ಬಂದರು. ಚಿತ್ರದ ನಿಲುವನ್ನು ನೋಡಿ ಎಲ್ಲರೂ ಆಶ್ಚರ್ಯ ಗೊಂಡು ಹೋದರು. ಹುಡುಗರ ಗುಂಪೊಂದು ಬಂದಾಗ ಒಂದು ಅದ್ಭುತವಾದ ಗುಟ್ಟನ್ನು ಕಂಡುಹಿಡಿದರು. ಮುಕುಂದರಾಯರನ್ನೇ ಕುಸುರಿಸಿ ಇಟ್ಟಹಾಗಿತ್ತು ಆ ಚಿತ್ರ. ಮುಕುಂದರಾಯರು ಸೊಂಟದಮೇಲೆ ಕೈ ಇಟ್ಟುಕೊಂಡು ತಲೆಯನ್ನು ಬಾಗಿಸಿರುವುದೊಂದೇ ಕಡಿಮೆ.

'ಲೊ! ಕೃಷ್ಣನಲ್ಲವೊ ಇದು. ಮುಕುಂದರಾಯರನ್ನು ನೋಡಿಕೊಂಡು ಕಾಪಿ ಹೊಡೆದಿದ್ದಾನೊ' ಎಂದ ಒಬ್ಬ ಒಕ್ಕಲಿಗರ ಹುಡುಗ. ಈ ಗುಟ್ಟು ರಟ್ಟಾದ ದಿನದಿಂದ ಮುಕುಂದರಾಯರ ಹೆಸರು ಕೃಷ್ಣ ರಾಯರಾಯಿತು.

ಈ ಚಿತ್ರಗಳಲ್ಲಿ ಚೆನ್ನಾಗಿದ್ದುದೂ ಕೃಷ್ಣನ ಚಿತ್ರವೇ ಅಲ್ಲವೆ! ಅದರಿಂದಲೇನೆ ಮಗುವಿಗೂ ಕೃಷ್ಣನೆಂದು ಸರಿಯಾದುದೇ ಹೆಸರಿಟ್ಟಿದ್ದಾನೆ ಅಂದರು ಕೆಲವರು. 'ಚಿತ್ರಗಳನ್ನೆಲ್ಲ ಬರೆದು ಒಂದು ವರ್ಷಕ್ಕೆ ಮೇಲಾಯಿತು. ಈ ಮಗು ಈಗ ತಾನೆ ಬಂದಿದೆ. ಕಾರಣವೇನೊ ಗೊತ್ತಿಲ್ಲ' ಅಂದರು ಹಲವರು. ನಿಜವಾಗಿ ಬೇರೆ ಕಾರಣಗಳೂ ಅದಕ್ಕೆ ಇರಬೇಕು.

ಸರಿಯಾಗಿ ಒಂದು ತಿಂಗಳ ಹಿಂದೆ ಮುಕುಂದರಾಯರು ಇದ್ದಕ್ಕಿದ್ದಹಾಗೆ ಹಾಸಿಗೆ ಹಿಡಿದರು. 'ಮೂವತ್ತು ದಿನ ಔಷಧ ತೆಗೆದುಕೊಂಡರೆ ವ್ಯಾಧಿ ನೀಗಿ ಹೋಗುತ್ತೆ' ಎಂದು ಆ ಊರಿನಲ್ಲಿದ್ದ ಸಿದ್ಧವೈದ್ಯರೊಬ್ಬರು ಹೇಳಿದರು. ಸಿದ್ಧವೈದ್ಯವೆಂದರೆ ಬಾಯಿಗೆ ಹಿತವಾದ ಔಷಧ ಸಿಕ್ಕೀತೆಂಬದರಲ್ಲಿ ರಾಯರಿಗೆ ಸಂದೇಹ. ಯುನಾನಿವೈದ್ಯ ರಾಜ ಮಹಾರಾಜರಿಗೆ ಮಾತ್ರ ಎಟುಕತಕ್ಕದ್ದಲ್ಲವೆ? ಆದುದರಿಂದಲೇ ಧರ್ಮಾಸ್ಪತ್ರೆಗೆ ಹೋದದ್ದು. ಡಾಕ್ಟರು ಏನೇನೊ ಪರೀಕ್ಷೆಮಾಡಿ ಜಿಲ್ಲೆಯ ಆಸ್ಪತ್ರೆಗೇನೇ ಚಿಕಿತ್ಸೆಗೆ ಹೋಗಬೇಕೆಂದು ಶಿಫಾರಸು ಕಾಗದ ಬರೆದು ಕೊಟ್ಟರು.

ಮುಕುಂದರಾಯರು ಜಿಲ್ಲೆಯ ಆಸ್ಪತ್ರೆಗೆ ತಮ್ಮ ಮನೆಯಾಕೆಯೊಡನೆ ಹೋದರು. ಅಪೆಂಡಿಸೈಟಿಸ್ಸಿಗೆ ಆಪರೇಷನ್ ನಡೆಯಿತು.

ಒಂದು ದಿನ ಆಸ್ಪತ್ರೆಗೆ ಯಾವನೊ ಒಬ್ಬ ಪಟಗಳನ್ನು ಮಾರಲಿಕ್ಕೆ ತಂದನು. ತಂಜಾವೂರಿನ ಪಟಗಳು. ಅವಾದರೂ ಗಾಜಿನಮೇಲೆ ಬರೆದದ್ದು. ಆಸ್ಪತ್ರೆಯ ಹಾಸಿಗೆಯಲ್ಲಿ ರೊಟ್ಟಿ ಹಾಲು ಉಂಡು ಸಪ್ಪಗೆ ಬದುಕನ್ನು ನೂಕುವ ಬಡಪಾಯಿಗಳಿಗೆ ಈ ಪಟಗಳು ಬಂದದ್ದು ಒಂದು ಔತಣದಂತಾಯಿತು. ಎಲ್ಲವನ್ನೂ ತಿರುವಿಹಾಕಿ ನೋಡಿದರು. ಅವನು ಹೇಳಿದ ಬೆಲೆಯನ್ನು ಕೇಳಿ ಬಾಯಿ ತೆರೆದರು. ಅದರಲ್ಲಿ ಒಂದು ಕೃಷ್ಣನ ಪಟವಿತ್ತು. ಆಕಾಶದಲ್ಲಿ ಬಿಳಿಯ ಮೋಡಗಳು. ಕೆಳಗೆ ಯಮುನಾನದಿ. ಅದರಲ್ಲಿ ಮೀನುಗಳೇ ಮೊದಲಾದ ಎಷ್ಟೋ ಜಲಜಂತುಗಳು ಪ್ರವಾಹಕ್ಕೆ ಇದಿರಾಗಿ ಹೋಗುವಹಾಗೆ ಬರೆದಿತ್ತು. ಒಂದೇ ಒಂದು ಹೊನ್ನೆಮರ. ಕೃಷ್ಣನು ರಾಧೆ ಕಾಣಲಿಲ್ಲವಲ್ಲ ಎಂದು ಚಿಂತಾಮಗ್ನನಾಗಿದ್ದ. ಪಟವು

ಬಹಳ ಒಳ್ಳೇಯದೆಂದು ಹೇಳುವಹಾಗಿರಲಿಲ್ಲ. ಮುಕುಂದರಾಯರಿಗೇನೊ ಅದನ್ನು ಕೊಂಡುಕೊಳ್ಳಬೇಕೆಂದು ಅನ್ನಿಸಿತು. ಅವರ ಮನೆಯಾಕೆಗೆ ಅದನ್ನು ತೆಗೆಯಬೇಕೆಂದು ಅವರಿಗಿಂತ ಹೆಚ್ಚು ಆಸೆ. ಆ ಚಿತ್ರಗಾರನು ಅದಕ್ಕೆ ಆನೆಯ ಬೆಲೆಯನ್ನೂ ಕುದುರೆಯ ಬೆಲೆಯನ್ನೂ ಹೇಳಿದರೆ ಅದನ್ನು ಯಾರು ಕೊಂಡಾರು? ಮುಕುಂದರಾಯರಿಗೆ ಅದನ್ನು ಹೇಗಾದರೂ ತೆಗೆದುಕೊಳ್ಳಬೇಕೆಂದು ಹುಚ್ಚು. ಅಸಲೇ ಸಿಕ್ಕದಿದ್ದರೆ ಮಾರುವುದು ಹೇಗೆ? ಚಿತ್ರಗಾರನಿಗೆ ಬೇಸರವಾಗಿ ಅಲ್ಲಿಂದ ಹೊರಟುಹೋದ.

ಆ ಮೊದಲು ಮುಕುಂದರಾಯರಿಗೆ ಒಂದೇ ಚಿಂತೆ. ಆ ದಿನ ರಾತ್ರಿ ಮುಕುಂದರಾಯರ ದೇಹಸ್ಥಿತಿಯಲ್ಲಿ ವ್ಯತ್ಯಾಸವಾಯಿತು. ಎಂದೂ ಇಲ್ಲದ ಜ್ವರ ಅಂದು ಕಾಣಿಸಿಕೊಂಡಿತು. ಮುಕುಂದರಾಯರಿಗೆ ಜ್ವರ ಬಂದನಂತರ ಆ ಪಟವನ್ನು ಕೊಳ್ಳದೇ ಹೋದದ್ದು ಏನೋ ಒಂದು ಕೆಟ್ಟ ಶಕುನದಂತೆ ಅವರ ಮನೆಯಾಕೆಗೆ ಅನಿಸಿತು. ಪಟವನ್ನು ಕುರಿತು ಯೋಚಿಸುತ್ತಲೇ ಇದ್ದರು ಮುಕುಂದರಾಯರು.

ಒಂದು ವಾರ ಕಳೆಯಿತು. ಒಂದು ದಿನ ನಡುರಾತ್ರಿಯಿರಬೇಕು. ಇದ್ದಕ್ಕಿದ್ದಹಾಗೆ ಮುಕುಂದರಾಯರು ಬೆಚ್ಚಿಬಿದ್ದು ಎದ್ದು ನಿದ್ರೆಯಲ್ಲಿ ಹೊರಳಾಡುತ್ತಿದ್ದ ಮನೆಯಾಕೆಯನ್ನು ಎಬ್ಬಿಸಿದರು. ಆ ಹೆಂಗುಸು ಭಯಪಟ್ಟು ಎದ್ದಳು.

'ಏನೂ ಇಲ್ಲ, ಭಯಪಡಬೇಡ. ಒಂದು ವಿಚಿತ್ರವಾದ ಕನಸು ಕಂಡೆ. ಒಂದು ದೊಡ್ಡ ತಿಮಿಂಗಿಲದಂತೆ ನೋಡವೊಂದು ಹೊರಳುತ್ತ ಬಂತು. ಆ ದಿನ ಒಂದು ಪಟ ಬಂದಿತ್ತು ನೋಡು, ಅಂಥ ಕೃಷ್ಣ ಅದರಲ್ಲಿ ಕಂಡ. ಇನ್ನು ಹದಿನೈದು ದಿನಗಳಲ್ಲಿ ನಿಮ್ಮ ಮನೆಗೆ ಖಂಡಿತವಾಗಿ ಬರುತ್ತೇನೆ ಎಂದ.' ಹೀಗೆ ತಾವು ಕಂಡ ಕನಸನ್ನು ಹೇಳಿದರು.

ಅವರ ಮನೆಯಾಕೆಗೆ ಮನಸ್ಸಿನೊಳಗೆ ಬಹಳ ಆನಂದ. 'ಅದೇ ಯೋಚಿಸುತ್ತಾ ಇದ್ದೆ,—ಏನಪ್ಪ ಇದು, ಸ್ನಾನವಾಡಿ ಮೂರು ತಿಂಗಳಾಯಿತು ಎಂದು. ಭಗವಂತನ ಕೆಲಸವೆಲ್ಲ ನಮಗೆ ಹೇಗೆ ತಿಳಿಯಬೇಕು?' ಎಂದಳು.

ಒಂದು ವಾರದನಂತರ ಮುಕುಂದರಾಯರು ಆಸ್ಪತ್ರೆಯಿಂದ ಊರಿಗೆ ಹಿಂತಿರುಗಿದರು. ಮನೆಗೆ ಬಂದ ದಿನ ಬೆಳಗ್ಗೆ ಹತ್ತು ಗಂಟೆ ಸಮಯ. ಪಕ್ಕದ ಊರಿನ ಕುಲಕರ್ಣಿಯವರು ಪತ್ರಿಕೆಯ ದೊಡ್ಡ ಹಾಳೆಯಲ್ಲಿ ಏನನ್ನೊ ಕಟ್ಟಿ ಎತ್ತಿಕೊಂಡು ಬಂದರು.

'ಏನು, ಇಷ್ಟು ಬಂದೋಬಸ್ತಾಗಿ ಹಗ್ಗ ಹುರಿ ಕಟ್ಟಿಕೊಂಡು ಬಂದಿದ್ದೀರಲ್ಲ' ಎಂದರು ಮುಕುಂದರಾಯರು.

'ತಂಜಾವೂರಿಗೆ ಹೋಗಿದ್ದೆ. ಆಕೆ ತಂಜಾವೂರಿನ ಪಟ ಬೇಕೆಂದು ಬಹಳ ದಿನಗಳಿಂದ ಕಾಡಿಸುತ್ತಿದ್ದಳು. ಒಂದು ಕೃಷ್ಣನ ಪಟ ತೆಗೆದು ಕೊಂಡು ಬಂದೆ.'

ಮುಕುಂದರಾಯರು ಸರಸರನೆ ಕಾಗದವನ್ನು ಬಿಚ್ಚಿ ಪಟವನ್ನು ನೋಡಿದರು. ಎಲಾ! ಆಸ್ಪತ್ರೆಯಲ್ಲಿ ತೆಗೆದುಕೊಳ್ಳಬೇಕೆಂದು ಬಯಸಿದ ಪಟವೇ ಅದು! ಅವರಿಗೆ ಆಶ್ಚರ್ಯವೂ ಆನಂದವೂ ಭಕ್ತಿಯೂ ಉಕ್ಕಿ ಉಕ್ಕಿ ಬಂತು. ಪಟವನ್ನು ತೆಗೆದುಕೊಂಡು ಹೋಗಿ ಒಂದು ಹಲಿಗೆಯ ಮೇಲಿರಿಸಿ, ದೀಪ ಹೊತ್ತಿಸಿ ನಮಸ್ಕರಿಸಿದರು.

ಇದೆಲ್ಲ ಕುಲಕರ್ಣಿಯವರಿಗೆ ಬಹಳ ವಿಚಿತ್ರವಾಗಿ ಕಂಡುಬಂತು. ಆಗ ಕೃಷ್ಣನು ನನ್ನ ಮನೆಗೆ ಬರುವುದಾಗಿ ಕನಸಿನಲ್ಲಿ ಹೇಳಿದ ಮಾತನ್ನು ರಾಯರು ಕುಲಕರ್ಣಿಯವರಿಗೆ ವಿವರಿಸಿದರು.

'ಕೃಷ್ಣನ ಲೀಲೆಯೇ ಲೀಲೆ. ಆದುದರಿಂದಲೇ ಭಾಗವತವನ್ನು ಕಲಿಯುಗದ ವೇದವೆಂದು ನಾನು ಹೇಳುವುದು. ಪಟವು ಇಲ್ಲಿಯೇ ಇರಲಿ. ತಿರುಚ್ಚರೆಗೆ ಹೋಗಬೇಕಾಗಿದೆ. ನಾಳೆ ಬೆಳಿಗ್ಗೆ ಬಂದು ಪಟ ವನ್ನು ಊರಿಗೆ ತೆಗೆದುಕೊಂಡು ಹೋಗುವೆನು.' ಹೀಗೆ ಹೇಳಿ ಕುಲಕರ್ಣಿ ಹೊರಟುಹೋದರು.

ಅವರು ಹೊರಟುಹೋದ ನಂತರ ಮುಕುಂದರಾಯರು ತನ್ನ ಹೆಂಡತಿಯನ್ನು ಕೂಗಿ ಒಂದು ಸಲ, ಎರಡು ಸಲ, ಮೂರು ಸಲ ಕರೆ ದದ್ದಾಯಿತು. ಉತ್ತರವಿಲ್ಲ. 'ಕಿವಿ ಕಿವುಡಾಯಿತೇ?' ಎಂದು ಹೇಳುತ್ತ ಅಡಿಗೆ ಮನೆಯನ್ನು ಹೊಕ್ಕರು. ಅಲ್ಲಿಯೂ ಇಲ್ಲ. ಭಾವಿಕಟ್ಟೆಯ ಬಳಿಗೆ

ಹೋದರು. ಅಂಗಳದಲ್ಲಿ ನಿಂತಿದ್ದ ಅವರ ಹೆಂಡತಿ ಬೇಲಿಯ ಬಳಿಗೆ ಹೋಗಿ ನಿಂತುಕೊಂಡು 'ಬಹಳ ಚೆನ್ನಾಗಿ ಫಲಿಸಿತು ನಿಮ್ಮ ಕನಸು! ಏನೋ ಮನಸ್ಸಿನಲ್ಲೇ ಮಂಡಿಗೆ ಉಂಡೆ' ಎಂದಳು.

'ಆದರೇನಾಯಿತು! ಕೃಷ್ಣನು ಮನೆಗೆ ಬಂದೇ ಇದಾನೆ. ಹೇಗಾದರೂ ಮಾಡಿ ಈ ಪಟವನ್ನು ನಾವೇ ಇಟ್ಟುಕೊಳ್ಳಬೇಕು.'

'ನೀವು ಬೇಕಾದ್ದು ಮಾಡಿರಿ. ನನಗೊಂದೂ ಬೇಕಾಗಿಲ್ಲ.'

ಕುಲಕರ್ಣಿ ತಾವು ಹೇಳಿದ ಹಾಗೆ ಮರುದಿನ ಬರಲಿಲ್ಲ.

ಐದನೆ ದಿನ ಬೆಳಗಿನ ಜಾವ. ಮುಕುಂದರಾಯರು ಅರ್ಧ ನಿದ್ರೆಯಲ್ಲಿದ್ದರು. ಮನೆ ಬಾಗಿಲ ಹೊರಗೆ ಒಂದು ಹಸುಗೂಸು ಅಳುತ್ತಿರುವ ಹಾಗೆ ಶಬ್ದ ಕೇಳಿಸಿತು. ಮುಕುಂದರಾಯರು ಹೋಗಿ ಬಾಗಿಲು ತೆರೆದು ನೋಡಿದರು. ಅಳುತ್ತಿರುವ ಒಂದು ಗಂಡು ಮಗು! ಅದನ್ನು ಕೈಗೆ ಎತ್ತಿಕೊಳ್ಳಲು ತಿಳಿಯಲಿಲ್ಲ. 'ಯಾವಳೊ ಪಾಪಿ ಹೀಗೆ ತಬ್ಬಲಿಯಾಗಿ ಹಾಕಿ ಹೊರಟುಹೋಗಿದ್ದಾಳೆ' ಅನ್ನುತ್ತ ಒಳಗೆ ಹೋಗಿ ಹೆಂಡತಿಯನ್ನು ಕರೆದುಕೊಂಡು ಬಂದರು. ಆಕೆ ಬಂದು ಮಗುವನ್ನು ಅಕ್ಕರೆಯಿಂದ ಎತ್ತಿಕೊಂಡರು. 'ಹೀಗೆ ಹುಟ್ಟಿದ ಮಗುವನ್ನು ಬಿಸುಟು ಹೋದಳಲ್ಲ, ಕೊಂದು ಹೂಳಿಹಾಕಿಬಿಡಬಹುದಾಗಿತ್ತು!' ಎಂದರು ಆಕೆ.

'ಕೃಷ್ಣ ತಾನು ಬರುವುದಾಗಿ ಕನಸಿನಲ್ಲಿ ಹೇಳಿದ್ದನಲ್ಲ; ಬಂದೇ ಬಿಟ್ಟ ನೋಡಿದೆಯಾ! ಪಟ ದೊಡ್ಡದಲ್ಲ; ಈ ಮಗುವನ್ನು ಪಕ್ಕದ ಮನೆಯ ಬಾಗಿಲಲ್ಲಿ ಹಾಕಿ ಹೋಗಿದ್ದರೆ ನಾವು ಅದನ್ನು ನೋಡುತ್ತಿದ್ದೆವೊ ಇಲ್ಲವೊ ಕಾಣೆ' ಎಂದರು ರಾಯರು.

ಮಗುವಿನ ಸಮಾಚಾರವನ್ನು ಕಾನೂನಿನ ಪ್ರಕಾರ ಪೋಲೀಸಿನವರಿಗೆ ತಿಳಿಸಿದರು ರಾಯರು. ಪೋಲೀಸಿನವರು ಅದನ್ನು ಕುರಿತು ವಿಚಾರಣೆ ನಡೆಸಿದರು. ಏನೂ ಪತ್ತೆಯಾಗಲಿಲ್ಲ. ಮುಕುಂದರಾಯರು ಆ ಮಗುವನ್ನು ತಾವೇ ಬೆಳೆಸುವುದಾಗಿ ಅರ್ಜಿ ಹಾಕಿಕೊಂಡರು. ಆ ದಿನ ಬೆಳಗ್ಗೆಯೆಲ್ಲಾ ಬೀದಿಜನರು ಆ ಮನೆಗೆ ಮುತ್ತಿಗೆ ಹಾಕಿದಂತೆ ನೆರೆದಿದ್ದರು.

ಸುಮಾರು ಎರಡು ಗಂಟೆಯಿರಬಹುದು; ಕುಲಕರ್ಣಿ ಬಂದರು.

'ಇದೊ ಊರಿಗೆ ಹೊರಡುವವನಿದ್ದೇನೆ. ಪೇಪರು ಕೊಡಿ, ಪಟವನ್ನು ಕಟ್ಟಿಕೊಳ್ಳುತ್ತೇನೆ.' ಅಂದರು.

'ಪಟವನ್ನು ಪೂಜೆಗೆ ಇರಿಸಿಕೊಂಡಿದ್ದೇನೆ. ನನ್ನ ಬಳಿಯೇ ಇರಲಿ' ಎಂದರು ಮುಕುಂದರಾಯರು.

'ಇಲ್ಲ ನನಗೆ ಬೇಕು.'

ಕುಲಕರ್ಣಿ ಅಂಗಳಕ್ಕೆ ಹೋಗಿ ನೋಡಿದರು. ಕೃಷ್ಣನ ಪಟಕ್ಕೆ ಅಪರಮಿತವಾಗಿ ಅಲಂಕಾರ ಮಾಡಿತ್ತು. ಊದುಬತ್ತಿಯ ಸುವಾಸನೆ ಗಮಗಮ ತುಂಬಿತ್ತು. ಪಟಕ್ಕೆ ಇದಿರಾಗಿ ಒಂದು ಮಗು ಮಲಗಿ ನಿದ್ರಿಸುತ್ತಿತ್ತು.

'ಇದು ಯಾರ ಮಗು?'

'ನಮ್ಮ ಮಗುವೆ.'

'ಇದು ಸಹಿತ ಮಾವಿನ ಗಿಡ ಹುಟ್ಟಿಸುವ ಮಂತ್ರವಿದ್ಯೆಯೇನು?'

'ನನ್ನ ಕನಸು ಫಲಿಸಿತು. ನಾನು ಪಟವನ್ನು ತೆಗೆಯಬೇಕೆಂದಿದ್ದೆ. ನೀನು ತೆಗೆದುಕೊಂಡು ಬಂದೆ. ನೀನು ಹೇಳಿದ ಪ್ರಕಾರ ನೂರನೆ ದಿನ ಬೆಳಿಗ್ಗೆ ಬಂದಿದ್ದರೂ ನಾನು ಪಟವನ್ನು ಬಹುಶಃ ಕೊಡಬಹುದಾಗಿತ್ತು. ಈಗ ಹೇಗೆ ಕೊಡುವದು? ಕೃಷ್ಣನ ಪಟವು ಆದಾಗಿಯೇ ಬಂತು! ಈ ಮಗುವೂ ತಾನಾಗಿಯೇ ಬಂದಿದೆ! ಪಟದ ಹಣವನ್ನು ಮುಂದಿನವಾರ ಕೊಟ್ಟು ಬಿಡುವೆ. ಪಟವನ್ನು ಮಾತ್ರ ಕೇಳಬೇಡ. ನಿನ್ನ ಪುಣ್ಯವಾಗಿ ಇದು ಇರಲಿ' ಎಂದು ಬಹಳ ವಿನಯದಿಂದ ಪ್ರಾರ್ಥಿಸಿಕೊಂಡರು ಮುಕುಂದರಾಯರು.

ಕುಲಕರ್ಣಿಗೆ ಬದಲು ಮಾತಾಡಲು ನಾಲಗೆ ಬರಲಿಲ್ಲ. ಅವರು ಊರಿಗೆ ಹೊರಟು ಹೋದರು.

ಕೃಷ್ಣನು ಮನೆಗೆ ಬರುವನೆಂದು ಮಾತುಕೊಟ್ಟಿದ್ದನಲ್ಲವೆ? ಮೊದಲು ಪಟವಾಗಿಯೂ ಅನಂತರ ಮಗುವಾಗಿಯೂ ಬಂದ. ಆದುದರಿಂದ ಆ ಮಗುವಿಗೆ ಕೃಷ್ಣ ಹೆಸರಿಡದೆ ಬೇರೆ ಯಾವ ಹೆಸರು ಇಡಲಾದೀತು?

ಆದರೆ ಒಂದು ಮಾತು ಮುಕುಂದರಾಯರು ಮಗುವಿಗೆ ಯಾವ ಹೆಸರಿಟ್ಟರೇನು? ಊರಿನವರೇನೊ ಆ ಮಗುವನ್ನು 'ಬಂಜೆಯ ಮಗ' ಎಂದು ತಾನೆ ಅನ್ನುವುದು?



# ಇದಿರಾಳಿ

**ಶ್ರೀಮಾನ್ ಬಿ. ಎಸ್. ರಾಮಯ್ಯನವರು** ತರುಣ ಲೇಖಕರಲ್ಲಿ ಬಹಳ ವಿಖ್ಯಾತರು. ಏನೇ ಬರೆಯಲಿ, ಸಾವಧಾನದಿಂದ ಬರೆಯುತ್ತಾರೆ. ಶಬ್ದಗಳನ್ನು ತೂಕ ಮಾಡಿ ಬೆಲೆ ಕಟ್ಟಿ ಬಳಸುತ್ತಾರೆ. ಸಣ್ಣ ಕತೆಗಳ ಸಂಪ್ರದಾಯದ ಕಡೆಗೆ ಇವರ ಗಮನ ಬಹಳ. ಅಂತೆಯೇ ಜೀವನದ ಮೇಲ್ಮಟ್ಟವನ್ನು ಮುಟ್ಟುವ ಕಲೆಯ ಆದರ್ಶವನ್ನು ಲಕ್ಷ್ಯದಲ್ಲಿರಿಸಿಕೊಂಡು ಲೇಖನ ವ್ಯವಸಾಯವನ್ನು ಸಾಗಿಸುತ್ತಾರೆ. ತಮಿಳು ಕಥಾ ಸಾಹಿತ್ಯಕ್ಕಾಗಿ ಮೀಸಲಾಗಿದ್ದ "ಮಣಿಕ್ಕೊಡಿ" ಎಂಬ ಪಕ್ಷಪತ್ರಿಕೆಗೆ ಹಿಂದೆ ಇವರು ಸಂಪಾದಕರಾಗಿದ್ದರು. ಈಚೆಗೆ ಚಿತ್ರಪಟಗಳಿಗೆ ಸಂವಾದ ಬರೆಯುವ ಕೆಲಸದಲ್ಲಿ ತೊಡಗಿದ್ದಾರೆ.

"ಇದಿರಾಳಿ" ಬಹಳ ದಿನಗಳ ಹಿಂದೆ "ಮಣಿಕ್ಕೊಡಿ"ಯಲ್ಲಿ ಪ್ರಕಟವಾದ ಕತೆ. ಶ್ರೀಮಾನ್ ರಾಮಯ್ಯನವರ ಕೃತಿಗಳ ಒಂದು ಮಾದರಿ ಎಂದೆಣಿಸಬಹುದು.

ಬಾಗಿಲ ಹೊರಗೆ ಹೊನ್ನೆಮರದಮೇಲಿಂದ ಕೋಗಿಲೆ ಇಂಪಾಗಿ ಹಾಡಿತು. ಆದರ ದನಿ ಕೇಳಿ ಕೃಷ್ಣನು ಬೆಚ್ಚಿಬಿದ್ದವನಂತೆ ಎದ್ದುನಿಂತ. ಯಾವುದೋ ಹೊಸ ಆಲೋಚನೆಮಾಡಿ ತನ್ನನ್ನು ಗೋಳಾಡಿಸುವುದಕ್ಕೆ ಪ್ರಯತ್ನಿಸುತ್ತಿದಾನೆಂದು ರಾಧೆಗನಿಸಿತು. ಸಾಮಗಾನದ ಗಂಭೀರವಾದ ಮತ್ತು ಇಂಪಾದ ಧ್ವನಿಯಂತೆ ಅವಳ ಕಣ್ಣಿಂದ ಕಾಂತಿ ಹೊರಚಿಮ್ಮಿತು.

ಕೃಷ್ಣ ಕೊಳಲು ಹಿಡಿದಿದ್ದ ತನ್ನ ಎಡಗೈಯಿಂದ ಜುಟ್ಟಿನ ಗಂಟನ್ನು ಸರಿಮಾಡಿಕೊಂಡ. ಅವಳೊಡನೆ ಏನೊಂದೂ ಹೇಳದೆ ಅಲ್ಲಿಂದ ಹೊರಟ.

ರಾಧೆಗೆ ಆಗಲೂ ಅವನು ನಿಜವಾಗಿ ಹೊರಗೆ ಹೋಗುತ್ತಿದ್ದಾನೆಂದು ಹೊಳೆಯಲಿಲ್ಲ. ಇದು ಯಾವುದೊ ಹೊಸ ಆಟದ ಪೀಠಿಕೆಯೆಂದು ಎಣಿಸಿದಳು. ಅವನ ಕೀಟಲೆ ಆಟಗಳಿಂದ ಅವಳಿಗೆ ಕಷ್ಟವಾಗುತ್ತಿತ್ತಾಗಲಿ ಆ ನೋವಿನಲ್ಲೂ ಸುಖವೆ. ಆ ಸುಖಕ್ಕೆ ಬೇರೆ ಯಾವುದೂ ಸಮವೆಂದು ಹೇಳುವಹಾಗಿರಲಿಲ್ಲ.

'ಕೃಷ್ಣಾ' ಎಂದು ಇದ್ದಕ್ಕಿದ್ದಹಾಗೆ ಕರೆದಳು ರಾಧೆ. ಅವಳ ಹೃದಯಕಮಲವನ್ನು ಯಾರೋ ಬೆಂಕಿಯಲ್ಲಿ ಸುಡುವಹಾಗೆ ನೋವಾಯಿತು. ಕೃಷ್ಣನು ನಿಜವಾಗಿಯೆ ಹೊರಗೆ ಹೊರಟುಹೋದ!

ಆ ಮಾತಿನಲ್ಲಿ, ಆ ಹಾತೊರೆಯುವ ಹೃದಯದ ಕರೆಯಲ್ಲಿ, ಕೃಷ್ಣನ ಕಿವಿಗಳಿಗೆ ಅಮೃತವನ್ನೇ ಕರೆಯುವ ಆ ಧ್ವನಿಯಲ್ಲಿ ಪೆಟ್ಟುತಿಂದ ಹೆಣ್ಣಾನೆಯು ತೋರುವ ಅಪಾಯದ ಚಿಹ್ನೆ ಕೂಡಿತ್ತು. ಬೇಡನ ಬಾಣ ತಾಗಿದ ಕೋಗಿಲೆಯ ನೋವಿನ ಕೂಗಿನಂತೆ ಕಂಪಿಸಿತು ಅವಳ ಧ್ವನಿ.

ಬೆಚ್ಚಿಬಿದ್ದು ಹಿಂತಿರುಗಿದ ಕೃಷ್ಣ. ಅವನ ಮುಖದಲ್ಲಿ ಅರಳಿದ್ದ ಕಿರುನಗೆ ಮಾಯವಾಯಿತು. ಎರಡೇ ಹೆಜ್ಜೆಗೆ ರಾಧೆಯಬಳಿ ಸೇರಿದ. ಜಗದ್ರಕ್ಷಕ ಕರುಣಾಕರ ತನ್ನ ಕನಿಕರದ ಕಣ್ಣಿಂದ ಅವಳನ್ನು ಎಳೆದಪ್ಪಿಕೊಂಡು 'ರಾಧಾ' ಎಂದನು. ಉತ್ತರವಿಲ್ಲ.

'ರಾಧಾ'

ಮತ್ತೆ ಮೌನ. ಅವಳ ಹೃದಯದ ಪರಿತಾಪವು ಶಾಂತವಾಗು ತ್ತಿತ್ತೆಂದು ಮುಖದಿಂದ ಭಾಸವಾಗುತ್ತಿತ್ತು. ಅವಳ ಮುಂಗುರುಳೊಡನೆ ಆಡುತ್ತಾ ಮುದ್ದಿನಿಂದ ಕೃಷ್ಣ 'ಹುಚ್ಚಿ' ಎಂದ. ಅವನ ದಿವ್ಯ ವದನದಲ್ಲಿ ತುಂಟತನದ ಕಿರುನಗೆ ಮತ್ತೆ ಅರಳಿತು.

ಒಂದುಸಾರೆ ಭಾರವಾಗಿ ನಿಟ್ಟುಸಿರುಬಿಟ್ಟು ರಾಧೆ ಮಾತನಾಡಿದಳು. 'ನಾನು ಹುಚ್ಚಿಯಾದರೆ ಆದೆ. ನಿನ್ನಂಥ ಕೆಲಸಕ್ಕೆಬಾರದವನಿಗೆ ನನ್ನಂಥ ಹುಚ್ಚಿ ತಾನೆ ಬೇಕು?' ಎಂದಳು.

'ರಾಧಾ! . . . .'

'ಏಕೆ ನುಂಗಿಕೊಳ್ಳುತ್ತೀ? ಹೇಳಿಬಿಡು. ನನ್ನನ್ನು ಉದಾಸೀನ ಮಾಡಿದೆ. ಯಾವುದೊ ಕಟ್ಟಿಗೆಯ ತುಂಡನ್ನು ಒದ್ದು ತಳ್ಳಿಹಾಕುವಹಾಗೆ ಹೊರಟೆ. ಅಲ್ಲವೆ?'

'ರಾಧಾ, ನೀನು ಹೀಗೆ ಹೇಳುವುದು ತರವೇ?'

'ತರವಂತೆ ತರ. ನ್ಯಾಯದ ಮಾತನಾಡಲು ನಿನಗೆಷ್ಟು ಅಧಿಕಾರವೋ? ನೀನು ಕಳ್ಳ, ದುಷ್ಟ, ಅಯೋಗ್ಯ. ನೀತಿ ನ್ಯಾಯಗಳ ಪವಿತ್ರತೆಯನ್ನು ಕೆಡಿಸುವ ಗೋಜಿಗೆ ಹೋಗಬೇಡ.'

ಕೃಷ್ಣನ ಹೃದಯ ನಡುಗಿತು. ಅವನ ಕಿರುನಗೆಯ ಮುಖ ಸೊರಗಿತು. ಬಹಳ ಮುದ್ದಿನಿಂದ ಅವಳನ್ನು ಗಟ್ಟಿಯಾಗಿ ಅಪ್ಪಿಕೊಂಡು 'ಅಳಬೇಡ, ಹುಚ್ಚಿ. ಈಗೇನಾಯಿತು? ಬಹಳ ಅವಸರದ ಕೆಲಸವೊಂದು ಜ್ಞಾಪಕಕ್ಕೆ ಬಂದುದರಿಂದ ಒಮ್ಮೆಲೆ ಹೊರಟೆ. ಅಷ್ಟೆ. ಪುನಃ ಬಾರದೆ ಇರುತ್ತಿದ್ದೆನೆ? ನಿನ್ನನ್ನು ಅಗಲಿ ಬೇರೆಯಾಗಿರುವುದೆಂದರೆ ನನಗೆ ಕಬ್ಬು ತಿನ್ನುವಹಾಗೆ ಎಂದು ಎಣಿಸಿದೆಯಾ?' ಎಂದ.

'ಇಲ್ಲದಿದ್ದರೆ ಬೇವಿನಕಾಯೇನೋ. ಅಲ್ಲವೆ? ಹೋಗು. ಕಣ್ಣಿಗೆ ಕಂಡಾಗ ಒಂದು ಮಾತು; ಹೊರಗೆ ಹೊರಟರೆ ಅವಳು ಯಾರೊ? ನಿನ್ನನ್ನು ನೋಡುತ್ತಿರುವುದು ನಿನ್ನೆ ಮೊನ್ನೆಯಿಂದಲೆ!' ಎಂದಳು ರಾಧೆ ಸಂಕೋಚದಿಂದ.

ಅವಳ ಮಾತು ಕೃಷ್ಣನ ಮುಖದಲ್ಲಿ ಪುನಃ ಕಿರುನಗೆ ಮೂಡಿಸಿತು. ಆದರೆ ಅವಳು ನೋಡಿಯಾಳೆಂದು ಮುಖವನ್ನು ಬೇರೆ ಕಡೆಗೆ ತಿರುಗಿಸಿದನು.

'ಏಕೆ, ಮಾತಾಡುವುದಿಲ್ಲವೆ?' ಎಂದು ರಾಧೆ ಅಧಿಕಾರವಾಣಿಯಿಂದ ಕೇಳಿದಳು.

ಬೆಚ್ಚಿಬಿದ್ದು ತಿರುಗಿದ ಕೃಷ್ಣ. 'ಏನು ಹೇಳುವುದಿದೆ? ನೀನು ಕೇಳಬೇಕಾದ್ದನ್ನು ಕೇಳು' ಎಂದನು.

'ಎಲ್ಲಿಗೆ ಹೊರಟದ್ದು?'

'ಮನೆಗೆ'

'ನಿಜವಾಗಿ ಮನೆಗೇನೇ?'

'ಹೌದು!'

'ಹೌದು ಅಂದರೆ?'

'ನಿಜವಾಗಿ ಮನೆಗೇನೆ'

'ಆದರೆ ಏನೂ ಹೇಳದೆಯೆ ಹಾಗೇತಕ್ಕೆ ಹೊರಟೆ?'

'ಇದರಲ್ಲಿ ವಿಶೇಷವೇನಿರುವುದೊ ನನಗೆ ತಿಳಿಯುಲಿಲ್ಲವಲ್ಲ. ಎಂದಿನಂತೆ ಹೊರಟೆ. ಸರಿ, ಸರಿ, ನಿನ್ನ ಸ್ವಭಾವ ನನಗೆ ತಿಳಿದೇಯಿದೆಯಲ್ಲ. ನನ್ನನ್ನು ಹೆದರಿಸಬೇಕು. ಅದಕ್ಕಾಗಿ ನಿನ್ನ ಸ್ತ್ರೀಸಾಹಸವನ್ನೆಲ್ಲ ಉಪಯೋಗಿಸಿದೆ. ಅಬ್ಬ! ಹೇಗೆ ನಡುಗಿಹೋದೆ ನಾನು ಗೊತ್ತೆ? ಏನೋ ಯಾವುದೋ ಎಂದು ಹೆದರಿಹೋದೆ. ನನ್ನ ಮುದ್ದು ಕಂದ! ಅಳಬೇಡ. ಇಕೊ, ನನ್ನನ್ನು ನೋಡು. ನಿಜವಾಗಿಯೆ! ..... ಹುಂ .....' ಎಂದು ಹೇಳುತ್ತಾ ಅವಳ ಗಲ್ಲವನ್ನು ಹಿಡಿದು ಮುಖವನ್ನು ಎತ್ತಿದನು. ಅವನ ಪ್ರಯತ್ನವನ್ನು ತಡೆಯುವ ಆಲೋಚನೆಯಿಲ್ಲದಂತೆ ರಾಧೆ ತನ್ನ ಮುಖವನ್ನೆತ್ತಿ ಅವನನ್ನು ನೋಡಿದಳು ಒಂದೇ ಕ್ಷಣ. ಇಬ್ಬರೂ ಬಾಯ್ತೆರೆದು ಕಲಕಲನೆ ನಕ್ಕರು.

'ಸರಿ. ನನಗೆ ಒಂದು ಅವಸರದ ಕೆಲಸವಿದೆ.' ಎಂದು ಹೇಳಿ ಎದ್ದನು. ರಾಧೆಯೂ ಅವಸರವಸರವಾಗಿ ಎದ್ದು ನಿಂತಳು. ಕೃಷ್ಣನು

ಆಟಕ್ಕೆ ಅವಳ ಕೆನ್ನೆಯನ್ನು ಮುಟ್ಟಿ ಗಟ್ಟಿಯಾಗಿ ಕಲಕಲನೆ ಒಣನಗು ನಕ್ಕು ಅಲ್ಲಿಂದ ಹೊರಬಿದ್ದ. ರಾಧೆಯ ಹೃದಯದಲ್ಲಿ ವಿವರಿಸಲಾಗದ ಮೋಸದ ಭಯವೊಂದು ಎದ್ದಿತು.

೨

ರಾಜದಂಡ, ಸೈನ್ಯ ಮೊದಲಾದ ಅಧಿಕಾರ ಚಿಹ್ನೆಗಳು ಇಲ್ಲದೆಯೆ ತಮ್ಮ ಹೃದಯಗಳನ್ನೇ ಸಿಂಹಾಸನ ಮಾಡಿಕೊಂಡು ರಾಜ್ಯವಾಳುತ್ತಿರುವ ಬಾಲಕೃಷ್ಣನನ್ನು ಪಡೆದ ಹೆಮ್ಮೆಯಿಂದ ಗೋಕುಲವೆಲ್ಲ ಕಂಗೊಳಿಸಿತು. ಆ ಸಂಜೆಯ ಹೊತ್ತು ಗೋಕುಲದ ನೋಟವು ಪ್ರಪಂಚಕ್ಕೆಲ್ಲ ತನ್ನ ಹೆಚ್ಚಳವನ್ನು ಎತ್ತಿ ತೋರಿಸುತ್ತ ಸಂತೋಷದ ಹುಚ್ಚಿನಲ್ಲಿ ನಗುವ ಹಾಗಿದೆ.

ಎರಡು ದಂಡೆಗಳಲ್ಲೂ ಅಲೆಯೆಬ್ಬಿಸಿ ಹರಿವ ಪ್ರವಾಹದಂತೆ ಅಲೆದಾಡಿ, ವಿರಹದಿಂದ ತಪಿಸುವ ಯುವತಿಯು ಶೋಕಸಂಗೀತವನ್ನು ಹೋಲುವ ರೀತಿಯಲ್ಲಿ ನಡೆಯುತ್ತಿತ್ತು ಯಮುನೆ. ಗಿಡ ಬಳ್ಳಿಗಳು, ಪಕ್ಷಿಗಳು, ತುರುಮಂದೆ ಮೊದಲಾದುವು ಸಹಿತ ಹೆಮ್ಮೆಯಿಂದಲೂ ಸಂತೋಷದಿಂದಲೂ ಉಲ್ಲಾಸಗೊಂಡಂತೆ ಕಾಣುತ್ತಿದ್ದವು. ಗೋಕುಲದ ಗೋಪಿಯರೂ ಗೋಪಾಲಕರೂ ಬಣ್ಣಿಸಲಾಗದ ಸುಖಸಂತೋಷದ ಮತ್ತಿನಲ್ಲಿ ಮುಳುಗಿ ಅರಸುತನವಾಡುವ ಕೃಷ್ಣನೊಡನೆ ಬದುಕಿ ಬಾಳುವ ಹೆಮ್ಮೆಯಿಂದ ತಿರುಗಾಡುತ್ತಿದ್ದರು.

ಆಗ ತಾನೆ ಅಲಂಕಾರ ಮಾಡಿಕೊಂಡು ಮನೆಯ ಬಾಗಿಲಲ್ಲಿ ನಿಂತಿದ್ದಳು ರಾಧೆ. ಬೆಳಗ್ಗೆ ತನ್ನನ್ನು ಗೋಳಾಡಿಸಿ ಬಿಟ್ಟುಹೋದ ಆ ಕಳ್ಳನನ್ನು ಹುಡುಕಿ ಹುಡುಕಿ ಆಕೆಯ ಕಣ್ಣು ಬೇಸತ್ತಿವೆ. ಬೀದಿಯ ಉತ್ತರ ದಿಕ್ಕಿನ ಓಣಿಗೆ ಪಕ್ಕದ ಬೀದಿ ಬಂದು ಸೇರುವ ಎಡೆಯಲ್ಲಿ ಅವಳ ನೋಟ ನೆಟ್ಟುಹೋಗಿದೆ.

ಧಡಕ್ಕನೆ ಎದ್ದು ನಿಂತಳು. ದೂರದಲ್ಲಿ ಆ ಓಣಿಯ ಕೊನೆಯಲ್ಲಿ ತಿರುಗಿದ ಆಕಳ ಮುಂದೆಯ ಕಾಲಿಂದೆದ್ದ ಧೂಳಿನ ಮುಸುಕಿನ ಹಿಂಬದಿಗೆ

ಕಾಣುವ ಒಂದು ರೂಪವನ್ನು ನೋಡಿ ಸ್ತ್ರೀ ಸಹಜವಾದ ಗಾಂಭೀರ್ಯ ದಿಂದ ಎದ್ದು ನಿಂತಳು. ಹೌದು; ಸಂದೇಹವಿಲ್ಲ ಆ ಕಳ್ಳನೇ ಅವನು. ಆ ಚೆಲುವಿನ ರೂಪು ಧೂಳು ತೆರೆಯ ಹಿಂದಿನಿಂದಲೇ ಅಲ್ಲ, ಮೇಘದ ಮುಸುಕಿನ ಹಿಂದಿದ್ದರೂ ಕಾಣಬಹುದುದಾದ ಒಂದು ಮಾಯೆ.

ತಟ್ಟನೆ ಮನೆಯೊಳಕ್ಕೆ ಓಡಿಹೋಗಿ ತನ್ನ ಕೋಣೆಯ ಬಾಗಿಲು ಮುಚ್ಚಿಕೊಂಡು ಚಿಲುಕ ಹಾಕಬೇಕೆಂಬ ವಿಚಾರ ಬಂತು ರಾಧೆಯ ಮನಸ್ಸಿಗೆ. ಅದಕ್ಕೂ ಮೀರಿ ಅವನ ಮನಮೋಹಕಸೌಂದರ್ಯ ರಾಶಿಯನ್ನು ಕುಡಿಯಬೇಕೆಂಬ ಜೀವದಾಹ ಉಕ್ಕಿಬಂತು. ನಿಂತ ಸ್ಥಳದಲ್ಲೇ ನೆಲಕ್ಕೆ ಸರಪಳಿಯಿಂದ ಕಟ್ಟಿಹಾಕಿದ ಹಾಗೆ ನಿಂತುಬಿಟ್ಟಳು.

'ಅಕೊ, ಬಂದುಬಿಟ್ಟ. ಆ ಅಯೋಗ್ಯನೊಡನೆ ಮಾತನಾಡ ಕೂಡದು ಅವನನ್ನು ನೋಡಲೂ ಬಾರದು' ಎಂದು ಹೇಳಿತು ಅವಳ ಮನಸ್ಸು. 'ಇಲ್ಲ, ಅವನೇನು ಮಾಡಿದ? ಗೋಕುಲಕ್ಕೆಲ್ಲ ಸೇರಿದ ಐಶ್ವರ್ಯವಲ್ಲವೆ ಅವನು? ಅವನನ್ನು ನನ್ನೊಬ್ಬಳ ಸೊತ್ತಾಗಿ ಮಾಡಲು ಪ್ರಯತ್ನಿಸುವುದು ಅನ್ಯಾಯವಲ್ಲವೆ? ನನ್ನ ಪಾಲಿಗೆ ವಂಚನೆಮಾಡಿ ಅವನು ಮೋಸಗೊಳಿಸುವುದಿಲ್ಲವಲ್ಲ. ಪರವಾಯಿಲ್ಲ ಒಂದುಸಲ ಕಣ್ಣು ತುಂಬ, ಹೃದಯದತುಂಬ ಅವನ ಸುಂದರ ರೂಪವನ್ನು ನೋಡೋಣ' ಎಂದಿತು ಅವಳ ಜೀವ.

ಆ ಹೋರಾಟದಲ್ಲಿ ಸಿಕ್ಕಿಬಿದ್ದು, ತಪ್ಪಿಸಿಕೊಳ್ಳಲು ದಾರಿಕಾಣದೆ ನೊರಗಿ ನಿಂತಳು. 'ಅಕೊ ನೋಡು, ಬಂದ ಒಳಗಿನಿಂದ ಹೇಳಿತು ಅವಳ ಹೃದಯ.

ಮರುಕ್ಷಣ ಇದ್ದಕ್ಕಿದ್ದಹಾಗೆ ಕೆಂಪೇರಿ ಕಪ್ಪಾಯಿತು ಅವಳ ಮುಖ. ಅಸಹನೆಯ ಬೆಂಕಿಯಲ್ಲಿ ಕಾದ ಸಲಾಕೆಯೊಂದು ಚರ್ರನೆ ಹೊಕ್ಕಿತು ಅವಳ ಹೃದಯವನ್ನು.

ಬರುವ ದಾರಿಯಲ್ಲಿ ಒಂದು ಮನೆ ಬಾಗಿಲಲ್ಲಿ ಒಬ್ಬಳು ನಿಂತಿದ್ದಳು. ಅವಳೇ ಮುಲ್ಕಿ ಎಳೆ ಹಸುಳೆ. ಎತ್ತಲೋ ಏನೋ ನೋಡುತ್ತ ನಿಂತಿದ್ದಳು. ಅವನು ರಾಧೆಯನ್ನು ಹುಡುಕಿಕೊಂಡು ಬರುವವನಿದ್ದರೆ ಅತ್ತಿತ್ತ ತಿರುಗಿನೋಡದೆ ಬರಬೇಕು ತಾನೆ! ಮುಲ್ಕಿಯ ಕೂದಲನ್ನು ಹಿಡಿದೆಳೆದ.

ಮುಳ್ಕಿ ತಿರುಗಿ ನೋಡಿದಳು. ಆ ನಗು ನೋಡು. ಶುದ್ಧ ಅಲ್ಪ! ಏನು ಮಹಾ ಎಂದೂ ದೊರಕದ ವಸ್ತು ದೊರೆಯಿತೇನೋ. ಆ ಕಳ್ಳನಿಗೆ ತಾನೆ ಏನು, ಯಾವುದಾದರೊಂದು ರೀತಿ ನಡತೆ ಬೇಡವೆ? ಅವಳ ಕೆನ್ನೆ ಹಿಡಿದೆಳೆದು ತೊದಲ್ಮಾತು ನುಡಿಯುತ್ತಾನಲ್ಲ.

'ಥೂ!' ಎಂದು ಬಾಯಿಬಿಟ್ಟು ಅಂದು ತುಟಿ ಸೊಟ್ಟಗೆ ಮಾಡಿ ತಲೆ ಎಡಕ್ಕೆ ತಿರುಗಿಸಿ ರಾಧೆ ಲಟಿಗೆ ಮುರಿದಳು. ಹಿತ್ತಿಲಿನಿಂದ ಯಾರೊ 'ರಾಧಾ' ಎಂದು ಕರೆದುದನ್ನು ಸಹಿತ ಅವಳು ಗಮನಿಸಲಿಲ್ಲ. ಬಿಲ್ಲಿನಿಂದ ಹೊರಟ ಅಂಬಿನಹಾಗೆ ಕೋಣೆಯೊಳಕ್ಕೆ ಓಡಿಹೋಗಿ ಚಿಲುಕ ಹಾಕಿಕೊಂಡಳು.

೩

'ರಾಧಾ!'

ಉತ್ತರವಿಲ್ಲ.

ಸ್ವಲ್ಪ ಹೊತ್ತು ಮೌನವಾಗಿ ನಿಂತ ಕೃಷ್ಣ. ಒಳಗಡೆಯಿಂದ ಬಿಕ್ಕಿ ಬಿಕ್ಕಿ ಅಳುವ ಸದ್ದು ಕೇಳಿಬಂತು. ಪುನಃ ಬಾಗಿಲನ್ನು ಮೆತ್ತಗೆ ಬೆರಳಿಂದ ತಟ್ಟಿ 'ರಾಧಾ' ಎಂದು ಕರೆದ.

ಮತ್ತು ಉತ್ತರವಿಲ್ಲ.

ಕೃಷ್ಣನ ಕಳವಳ ಮಿತಿಮೀರಿತು. 'ರಾಧಾ, ಬಾಗಿಲು ತೆಗಿ. ನೀನು ಜಾಣೆ! ಇಕೊ ನೋಡು, ನಿನಗಾಗಿ ಏನು ತಂದಿದೇನೆ ಗೊತ್ತೆ? ಈ ದಿನ ಬೆಳಗ್ಗೆ ಒಂದು ಹೊಸ ಹಾಡು ಕಟ್ಟಿದೇನೆ. ನನ್ನ ಕೊಳಲಿನಲ್ಲಿ ಅದನ್ನು ಬಾರಿಸಿ ತೋರಿಸಬೇಕೆಂದು ಓಡಿಯೋಡಿ ಬಂದೆ. ರಾಧಾ, ರಾಧಾ, ನನ್ನ ಮುದ್ದು ಅಲ್ಲವೆ. ನೀನೂ ಹೀಗೆ ಊರುಹುಡುಗಿಯರಹಾಗೆ ಹಠ ಮಾಡಿದರೆ.... ರಾಧಾ! ಈ ಹಾಡೊಂದು ಮಾತ್ರ ಕೇಳಿಬಿಡು. ಅನಂತರ ನೀನೇ ನನ್ನ ಕತ್ತುಹಿಡಿದು ಆಚೆಗೆ ದೂಡಿಬಿಡು; ಪರವಾಯಿಲ್ಲ....'

ಎಡಗೈಯಲ್ಲಿ ಹಿಡಿದಿದ್ದ ಕೊಳಲನ್ನು ಒಂದುಸಾರಿ ನೋಡಿದ. ಅವನ ಕಣ್ಣಲ್ಲಿ ನೀರು ಬಂತು. 'ಉಸಾ' ಎಂದು ನಿಟ್ಟುಸಿರುಬಿಟ್ಟು

ಆ ಬಾಗಿಲ ಮುಂದೆ ಅತ್ತಿಂದಿತ್ತ ಇತ್ತಿಂದತ್ತ ಅಡ್ಡಾಡಿದ. ಅವನ ಮುಖ ವನ್ನು ಏಕಟನಗುವೊಂದು ಆವರಿಸಿತು.

'ರಾಧಾ!' ಎಂದು ಮತ್ತೆ ಸಹನೆಗೂರಿ ಕರೆದ.

ಅದೇ ಹೊತ್ತಿಗೆ ಬೀದಿಯಾಚೆಯ ಮರದಮೇಲಿಂದ ಕೋಗಿಲೆ ಕೂಗಿತು. ಗೂಡಿಗೆ ಹೋಗುವ ಮುನ್ನ ಆ ದಿನದ ಕೊನೆಯ ಗೀತವನ್ನು ಹಾಡಿತು. ಅದರ ಕಂಠಧ್ವನಿಯಲ್ಲಿ ಅದರ ರಾಗದಲ್ಲಿ ಆ ಎರಡು ಮಾನವ ಹೃದಯಗಳ ಶೋಕವೂ ತುಂಬಿ ಬಂದಿತ್ತು.

ಕನಸಿನಲ್ಲಿ ಬೆಚ್ಚಿಬಿದ್ದು ಎದ್ದವನಹಾಗೆ ಆಕಡೆ ತಿರುಗಿದ. ಅದರ ರಾಗವನ್ನು ಒಂದು ಕ್ಷಣ ಕೇಳಿ ವ್ಯಾಕುಲಗೊಂಡು ನಿಂತ. ಮರು ಕ್ಷಣವೇ ಥಟಕ್ಕನೆ ಹೊರಹೊರಟು ಬೀದಿಗೆ ಸೇರಿ ದಕ್ಷಿಣಕ್ಕೆ ತಿರುಗಿ ಬೇಗಬೇಗನೆ ಹೊರಟ. ಅಳು ನಿಲ್ಲಿಸಿ ಗಂಟಲಿಂದ ಹೊರಟ ಬಿಕ್ಕನ್ನು ಕಷ್ಟಪಟ್ಟು ನುಂಗಿಕೊಂಡು ಒಳಗಡೆಯಿಂದ ಬಾಗಿಲ ಸಂದಿಯಲ್ಲಿ ನೋಡಿ ದಳು ರಾಧೆ. ಹಿಂದುಮುಂದಾದ ಕೃಷ್ಣನ ರೂಪವು ಮರೆಯಾಗುತ್ತ ಹೋಯಿತು. ಅದನ್ನು ನೋಡಿ ಅವಳ ಹೃದಯ ನೀರಾಯಿತು. 'ಅಯ್ಯೋ, ನನ್ನ ಕೃಷ್ಣನನ್ನು ಹೀಗೆ ಗೋಳಾಡಿಸುತ್ತೇನಲ್ಲ, ಪಾಪ!' ಎಂದು ಪಶ್ಚಾತ್ತಾಪವುಂಟಾಯಿತು.

ಅದೇ ಹೊತ್ತಿಗೆ ಬಾಗಿಲಕಡೆಯಿಂದ ಕೋಗಿಲೆಯ ಗಾನ ಕೇಳಿಸಿತು. ಅದನ್ನು ಕೇಳಿ ರಾಧೆಯೂ ಎದ್ದುನಿಂತಳು. ಬಾಗಿಲ ಹೊರಗೆ ಕೃಷ್ಣನ ಕಾಲನಡಗೆಯ ಸಪ್ಪಳದಿಂದ ಅಲ್ಲಿ ನಡೆಯುವುದನ್ನೆಲ್ಲ ಚಿತ್ರಪಟದಲ್ಲಿ ನೋಡು ವಂತೆ ಊಹಿಸಿ ನೋಡುತ್ತ ನಿಂತಳು.

'ಅಯ್ಯೋ, ಎಲ್ಲಿಗೋ ಹೊರಟೇ ಹೋದನೆ ನನ್ನಿನಿಯ ಮುನಿಸಿ ಕೊಂಡು....'

ಹೊಸಲನ್ನು ದಾಟಿಹೋದ ಕೃಷ್ಣ. ಭಯಪಡುತ್ತ ಬೇಂಕ ತೆಗೆ ದಳು ರಾಧೆ. ತೆರೆದು ಹೊರಬಾಗಿಲಿಗೆ ಓಡಿದಳು. ಅಕೋ, ಹೋಗುತ್ತಿ ದಾನೆ. ಕರೆಯೋಣವೆಂದು ತುಟಿ ಅಲುಗಾಡಿಸಿದಳು. ಮೌನವಾಗಿ ಮೆಟ್ಟಿಲಿಳಿದು ಅವನನ್ನು ಹಿಂಬಾಲಿಸಿದಳು.

ಬೀದಿಯ ದಕ್ಷಿಣದ ಕೊನೆಯನ್ನು ಸೇರಿದ ಕೃಷ್ಣನು ಬಲಗಡೆಗೆ ತಿರುಗಿದ. ಎಲ್ಲಿ ಹೋಗುತ್ತಾನೆ? ಯಮುನೆಯ ದಂಡೆಗೇ? ಈ ವೇಳೆಯಲ್ಲೆ? ಅದೂ ರಾಧೆಗೆ ಹೇಳದೆ. ಯಾರನ್ನು ನೋಡಲಿಕ್ಕೆ? ಡಬಡಬ ನಡುಗಿಹೋಯಿತು ಅವಳ ಹೃದಯ.

ಅವಳೂ ಬೀದಿಯ ಕೊನೆಯನ್ನು ಸೇರಿ ತಿರುಗಿದಳು. ಅದೊ ಹೋಗುತ್ತಿದಾನೆ. ಆ ಗುಡಿಸಿಲಿಗೆ ಹೋಗುತ್ತಿದಾನೆಯೆ? ಅಲ್ಲಿ ಯಾರಿದ್ದಾಳೆ?

ಮನೆಯ ಬಾಗಿಲು ಓರೆಯಾಗಿ ತೆರೆದಿದೆ. ಒಳಗೆ ಉರಿಯುವ ಸಮೆಯ ದೀಪದ ಬೆಳಕು ಬಾಗಲಹಿಂದೆ ಮೊಗಸಾಲೆಯಲ್ಲಿ ಪಸರಿಸಿರುವುದು ದೂರದಿಂದಲೇ ಕಾಣುತ್ತಿದೆ. ಕೃಷ್ಣ ಮನೆಯ ಮೆಟ್ಟಲು ಹತ್ತಿಬಿಟ್ಟ. ಬಾಗಿಲನ್ನು ತೆರೆದು ಒಳಕ್ಕೆ ಹೋಗುತ್ತಿದಾನೆ.

ರಾಧೆಯೂ ಬೇಗನೆ ಮನೆಬಾಗಿಲನ್ನು ಸೇರಿದಳು. ನಿಧಾನವಾಗಿ ಸದ್ದಾಗದಂತೆ ಹೆಜ್ಜೆಯಮೇಲೆ ಹೆಜ್ಜೆಯಿಟ್ಟು ಜಗುಲಿಯನ್ನು ಹತ್ತಿದಳು. ಒಳಗಿನಿಂದ ಒಂದು ದನಿ ದೀನವಾದ ದನಿ ಬಂತು.

'ಅಮ್ಮಾ! ಅವನು ಬರುವನೇ?'

'ಖಂಡಿತ ಬರುವನು ಕಂದ'

'ಸಂಜೆಗೆ ಖಂಡಿತ ಬರುವೆನೆಂದು ಹೇಳಿದ. ಬೆಳಗ್ಗೆ ಕೊಳಲನ್ನು ಎತ್ತಿ ಊದು ಎಂದು ಕೇಳಿದೆ. ಬೇಡ, ಈಗ ನನಗೆ ಬೇಸರವಾಗಿದೆ. ಸಾಯಂಕಾಲ ಬಂದಾಗ ಬಾರಿಸುತ್ತೇನೆ.' ಎಂದ. 'ಅಮ್ಮಾ, ಕೃಷ್ಣ ತುಂಬಾ ಒಳ್ಳೆಯವನೆ! ಅವನಿಗೆ ಎಲ್ಲರಲ್ಲೂ ಒಂದೇ ಬಗೆಯ ಪ್ರೇಮ ಮತ್ತು ಕರುಣೆ. ಆದರೆ ಉಳಿದವರು ಹಾಗಲ್ಲಮ್ಮ. ಅವನು ತಮ್ಮೊಬ್ಬರ ಪಾಲಿಗೇ ಇರಬೇಕೆಂದು ಅನ್ನುತ್ತಾರೆ. ರಾಧೆಯೇ ಬಹಳ ರಗಳೆ ಮಾಡುವುದು. ಇನ್ನೂ ಭಮತಿ, ಮಧುರೆ ಮೊದಲಾದವರು ಇದಾರೆ. ಅವರೆಲ್ಲ ಇರುವಾಗ ನನ್ನನ್ನು, ಈ ಹೆಳವಿಯನ್ನು ಅವನೇತಕ್ಕೆ ನೋಡಲು ಬರಬೇಕು?'

'ಊಂ.... ಆ ಕಳ್ಳ ಮೊಗಸಾಲೆಯಲ್ಲಿ ಬಚ್ಚಿಟ್ಟುಕೊಂಡಿದ್ದಾನೆಯೆ? ರಾಧೆ ಚೆಲುವೆಯಾಗಿದ್ದರೆ ನಿನಗೇನೆ? ಅವಳು ಹಾಗೆಯೇ ಇರುತ್ತಾಳೆ. ಹೌದು, ಕೃಷ್ಣ ಅವಳಿಗೊಬ್ಬಳಿಗೇ.' ಎಂದು ರಾಧೆಯ ಹೃದಯ ದಾರಿಹಿಡಿಯಿತು.

ಮತ್ತೆ ಧ್ವನಿ ಕೇಳಿಸಿತು. ಆ ಹೆಳವಿ ಹೇಳುತ್ತಿದ್ದಾಳೆ. ರಾಧೆ ಎಲ್ಲ ಯೋಚನೆಯನ್ನೂ ನಿಲ್ಲಿಸಿ ಕಿವಿ ನೆಟ್ಟಗೆ ಮಾಡಿಕೊಂಡಳು.

'ಅಮ್ಮಾ!'

'ಏನೇ ಕಂದ!'

'ಅವನು ಬಾರನಮ್ಮ! ಯಾರೊಡನೆಯೋ ಬೀದಿಯಲ್ಲಿ ಗಿಲಿ ಚಪ್ಪಾಳೆ ಆಡುತ್ತಿದ್ದಾನೆ. ನನ್ನನ್ನು ಈ ಮಂಚದಿಂದ ಇಳಿಸು. ಮೆಲ್ಲಗೆ ಹೋಗಿ ಕಣ್ಣುತುಂಬ ನೋಡಿಯಾದರೂ ಬರುತ್ತೇನೆ.'

'ಸ್ವಲ್ಪ ತಡೆ ಕಂದ. ಅವನು ಖಂಡಿತ ಬರುತಾನೆ. ಕೃಷ್ಣನಿಗೆ ಯಾರ ವಿಷಯದಲ್ಲೂ ಅಲಕ್ಷ್ಯವಿಲ್ಲ. ಕುಂಟಾಗಲಿ, ಹೆಳವಾಗಲಿ ಎಲ್ಲರೂ ಅವನಿಗೆ ಒಂದೆ' ಎಂದು ತಾಯಿ ಅವಳನ್ನು ಸಮಾಧಾನಪಡಿಸಿದಳು.

'ಅಮ್ಮಾ! ನನಗೂ ಅವನೊಡನೆ ಕೈ ಕೂಡಿಸಿ ಮಜ್ಜಿಗೆ ಕಡೆಯುವ ಆಟ ಆಡಬೇಕೆಂದು ಆಸೆಯಾಗಿದೆ. ಆದರೆ .....'

'ಆದರೇನು? ಬೇರೆ ಆಟಗಳಾಡೋಣ' ಎಂದು ಹೇಳುತ್ತ ಕೋಣೆಯನ್ನು ಹೊಕ್ಕ ಕೃಷ್ಣ.

ಅವನನ್ನು ಕಂಡೊಡನೆ ಹೆಳವಿಯ ಕಣ್ಣಲ್ಲಿ ಒಂದು ಹೊಸ ಕಾಂತಿ ಕಾಣಿಸಿತು. ಮುಖವು ಪೂರ್ಣಚಂದ್ರನಂತೆ ಪ್ರಕಾಶಿಸಿತು. ಚಪ್ಪಾಳೆ ಹೊಡೆಯುತ್ತ 'ಅಮ್ಮಾ, ಕೃಷ್ಣ!' ಎಂದು ಸಂತೋಷಾತಿಶಯದಿಂದ ಕೂಗಿದಳು.

ರಾಧೆ ಜಗುಲಿಯಿಂದ ಒಳಕ್ಕೆ ಬಂದಳು. ಬಾಗಿಲನ್ನು ಸ್ವಲ್ಪ ಸರಿಸಿ ಒಳಗೆ ಹಣಿಕಿಹಾಕಿ ನೋಡಿದಳು.

ನಡುಮನೆಯಲ್ಲಿ ಒಂದು ಬದಿಗೆ ಮಂಚದಮೇಲೆ ಹೆಳವಿ ಕುಳಿತು ಪಕ್ಕದ ಗೋಡೆಗೆ ಆತುಕೊಂಡಿದ್ದಾಳೆ. ಕೃಷ್ಣ ಅವಳ ಬಳಿಗೆ ಹೋಗಿ

ಮಂಚದ ಮೇಲೆ ಕುಳಿತು ಮುಖಾವಯವಗಳನ್ನು ಮುಟ್ಟಿ ಮುಟ್ಟಿ ಮುದ್ದಿಸುತ್ತಾನೆ. ಹೆಳವಿಯ ತಾಯಿಗೆ ಒಂದೆಡೆ ಆಶ್ಚರ್ಯ, ಸಂತೋಷ, ಮತ್ತೊಂದೆಡೆ ಹೆಮ್ಮೆ. ನಾನಾ ಭಾವನೆಗಳಿಂದ ನಿಂತಿದ್ದಾಳೆ ಇದಿರಿನಲ್ಲಿ. ರಾಧೆಯ ಹೃದಯದಲ್ಲಿ ತೀವ್ರವಾದ ನೋವುಂಟಾಯಿತು.

'ಏನು ಬೇಕಾಗಿದೆ. ನಗು ಮತ್ತು ಆಟ! ನಾಚಿಕೆಯಿಲ್ಲದವನೆ; ನಡತೆಯಿಲ್ಲದವನೆ' ಆ ದೃಶ್ಯವನ್ನು ನೋಡಿ ರಾಧೆಗೆ ಸಹಿಸಲಿಲ್ಲ. 'ಥೂ!' ಅಲ್ಲಿಂದ ಹೊರಟು ಹೋಗಬೇಕೆಂದು ತೋರಿತು. ಆದರೆ ಆ ಸ್ಥಳವನ್ನು ಬಿಟ್ಟು ಕದಲಲಾಗಲಿಲ್ಲ. ಕಾಲುಗಳನ್ನು ಮೊಳೆಗಳಿಂದ ನೆಲಕ್ಕೆ ಹೊಡೆದು ಸೇರಿಸಿದಹಾಗೆ ಇತ್ತು.

'ಕೃಷ್ಣ, ಸಂಜೆಗೆ ಕೊಳಲು ಬಾರಿಸುತ್ತೇನೆಂದು ಹೇಳಿದ್ದೆಯಲ್ಲ' ಎಂದು ಹೆಳವಿ ಮುದ್ದಿನಿಂದ ಕೇಳಿದಳು.

ರಾಧೆಯ ಹೊಟ್ಟೆಯುರಿ ಎಲ್ಲೆ ಮೀರಿತು. ಒಳ್ಳೆಘಳಿಗೆ, ಬಾಯಿ ಬಿಟ್ಟು ಏನೂ ಹೇಳದೆ ಇದ್ದುದು ದೇವರ ಕೃಪೆ!

ಅವಳಿಗೆ ಕೃಷ್ಣನ ಮುಖವನ್ನು ನೋಡಲಾಗಲಿಲ್ಲ. ಬೇರೆ ಕಡೆಗೆ ತಿರುಗಿದಾಳೆ. ಅದೊ, ಎತ್ತಿಬಿಟ್ಟ ಕೊಳಲು ಅಬ್ಬಾ! ಏನೋ ಮಹಾ ಬಿಂಕವಾಗಿ ಬಾರಿಸಹೋಗುತ್ತಾನೆ! ರಾಧೆಗೆ ನಗುಬಂತು. ಬರೀ ವಿಕಟ ನಗು.

ಬಾರಿಸಲು ಪ್ರಾರಂಭಿಸಿದ.

* * * *

ಸರಸರ ಬೀಸುವ ತೆಂಕಣ ಗಾಳಿಯಲ್ಲಿ ಅಲುಗಾಡುವ ಮಾಂದಳಿರಿನ ಮೆಲುಮೆಲು ದನಿಯಂತೆ ಮೊದಲಾಯಿತು ಕೊಳಲದನಿ. ಸ್ವಲ್ಪ ಸ್ವಲ್ಪವಾಗಿ ಏರಿತು. ಚಿಕ್ಕ ಊಟೆಯಹಾಗೆ ಮೊದಲಾಗಿ, ದಾರಿಯಲ್ಲಿ ಹಲವು ಬೇರೆ ಬೇರೆ ಝರಿಗಳಿಂದ ನೀರು ಕೂಡಿಸಿಕೊಂಡು ಹರಿಯುವ ಗಂಗಾನದಿಯಹಾಗೆ ಅದರ ಗತಿ ಬರಬರುತ್ತ ವೇಗವೂ ವಿಸ್ತಾರವೂ ಆಯಿತು.

ಆಹಾ! ಇದು ಏನು ರಾಧೆಯ ಹೃದಯವು ಏಕೆ ಹಾಗೆ ಬಡಿದುಕೊಳ್ಳುತ್ತಿದೆ? ಅವಳ ಹೃದಯವೊಂದೇಕೆ ದೇಹವೆಲ್ಲವೂ ಹೀಗೇಕೆ ಕರಗಿ

ಹೋಗುತ್ತಿರುವಂತೆ ಇದೆಯಲ್ಲ, ಅಯ್ಯೋ! ಈ ಇಂಪನ್ನು ತಡೆದು ಕೊಳ್ಳಲಾಗಲಿಲ್ಲ.

ಒಂದು ಕ್ಷಣ ಸುಳಿ ಸುಳಿ ಎಬ್ಬಿಸಿ ಗಿರಗಿರ ತಿರುಗುತ್ತ ಓಡುತಿದೆ. ಮರುಕ್ಷಣ ಶಾಂತವಾಗಿ ತನ್ನ ಆಳದ ಅಳವೇನೆಂದು ಹೇಳಲು ಸಾಧ್ಯ ವಾಗದಂತೆ ಕದಲುತ್ತ ನಡೆದಿದೆ. ಮಿಡಿದು ಮಿದುವಾಗೆಳೆದು ಬಾರಿಸಿದ ವೀಣೆಯ ತಂತಿಯ ನಡುಕದಂತೆ ತುಸು ಹೊತ್ತು, ಕಿವಿಯವರೆಗೂ ಎಳೆದುಬಿಟ್ಟ ಧನುಸ್ಸಿನ ಟೆಂಕಾರದಂತೆ ಒಂದು ಗಳಿಗೆ,

ಇಂಪೋ ಇಂಪು!

ಪರಿಮಿತವಾದ ಅಲ್ಪ ಶಕ್ತಿಯನ್ನು ಪಡೆದ ಮಾನವೇಂದ್ರಿಯಗಳನ್ನು ಸ್ತಂಭಿಸಿ ಅಚೇತನಗೊಳಿಸುವ ಇಂಪು.

ಸಹಿಸಲಾಗದ, ಆದರೂ ಮಾತಿನಿಂದ ವಿವರಿಸಲಾಗದ, ಚುರ‍್ರನೆ ಚುಚ್ಚುವಂಥ ದುಃಖದ ವೇದನೆಯಿಂದ ಕೂಡಿದ ಇಂಪು.

ಮನುಷ್ಯಪ್ರಪಂಚದ ಶೋಕವನ್ನು ಕಲ್ಪಿಸಿ ಕಾಣಬಹುದು. ಆದರೆ ಇಷ್ಟು ದೊಡ್ಡ ಪ್ರಪಂಚವನ್ನೂ ಚರಾಚರಗಳನ್ನೂ ಸೃಷ್ಟಿಸಿದ ಆ ಮಹಾಶಕ್ತಿಯ ಶೋಕವನ್ನು ಕಲ್ಪಿಸಿ ಕಾಣುವುದು ಸಾಧ್ಯವೆ? ಕೃಷ್ಣನು ಆಗ ಹಾಡಿದ ಗೀತದಲ್ಲಿ ಆ ಮಹತ್ತರಶೋಕವೆಲ್ಲ ತುಂಬಿತ್ತು. ಆ ಅತಿ ಮಾನುಷ ಶೋಕಗೀತದಲ್ಲಿ ಮನುಷ್ಯದೇಹದ ಇಂದ್ರಿಯಗಳನ್ನು ಸುಟ್ಟು ದಹಿಸುವ ತೀವ್ರಾವೇಗವುಳ್ಳ ಇಂಪು ತುಂಬಿತ್ತು. ರಾಧೆ ಮೈಮರೆತಳು. ಅವಳ ಇಂದ್ರಿಯಗಳು ಚೇತನಶೂನ್ಯವಾದವು. ಚಿಂತೆ ಅಡಗಿತು. ಇದಕ್ಕೂ ಮಿಗಿಲಾಗಿ ಒಂಟಿಯಾಗಿ ತುಡಿದುಕೊಳ್ಳುತ್ತಿದ್ದ ಅವಳ ಜೀವಾ ತ್ಮವು ಕೃಷ್ಣನ ಆ ದಿವ್ಯ ಮಾಧುರ್ಯದಲ್ಲಿ ಲೀನವಾಯಿತು.

ಹೆಳವ, ಅವಳ ತಾಯಿ ಎಂಬ ಭೇದಭಾವವೆಲ್ಲ ಮರೆಯಾಯಿತು.

ತನ್ನ ಬಳಿಯಲ್ಲಿದ್ದು ಚದುರಿಹೋದ ಜೀವಾಣುಗಳನ್ನು ಒಂದೊಂ ದಾಗಿ ಪುನಃ ತನ್ನ ಬಳಿಗೆ ಸೆಳೆದುಕೊಳ್ಳಲು ಸೂಜಿಗಲ್ಲಾಡಿಸುವಹಾಗೆ ಕೃಷ್ಣ ಕೊಳಲನ್ನು ಊದುತ್ತಲೇ ಇದ್ದ.

‡ ‡ ‡ ‡

ಕೊಳಲಗಾನವು ಯಾವಾಗ ನಿಂತಿತೋ ಹೇಗೆ ನಿಂತಿತೋ ರಾಧೆಗೆ ತಿಳಿಯದು. ದೀರ್ಘ ಮೂರ್ಛೆಯಿಂದ ಎಚ್ಚರಗೊಂಡವಳಹಾಗೆ ಎದ್ದಳು. ಅವಳ ಕರಣ ನಿಧಾನವಾಗಿ ಚೇತರಿಸಿಕೊಂಡವು. ತಟಕ್ಕನೆ ಲವಲವಿಕೆ ಬಂತು.

ಅಕೊ, ಆ ಹೆಳವಿ ಮಾತನಾಡುತ್ತಿದ್ದಾಳೆ. 'ಕೃಷ್ಣಾ, ನನ್ನನ್ನು ಮೋಸಗೊಳಿಸಿದೆಯಲ್ಲ!'

'ಏನು ಮೋಸಗೊಳಿಸಿದೆ?'

'ನನಗಾಗಿ ಕೊಳಲೂದುವುದಾಗಿ ಹೇಳಿದೆ, ಆದರ ಬದಲು ಏನೋ ಮಾಟಮಾಡಿಬಿಟ್ಟೆ. ನೀನು ಕೊಳಲನ್ನು ತುಟಿಯಮೇಲಿರಿಸಿಕೊಂಡದ್ದು ಮಾತ್ರ ನೋಡಿದೆ. ಆಮೇಲೆ ಏನು ನಡೆಯಿತೋ ತಿಳಿಯಲಿಲ್ಲ. ನನ್ನನ್ನು ಯಾರೋ ಬಲವಂತವಾಗಿ ವೇಗದಿಂದ ಆಕರ್ಷಿಸುವಂತಿತ್ತು. ಯಾರೋ ಎಲ್ಲಿಗೆ ಸೆಳೆಯುತ್ತಿದ್ದಾರೋ ತಿಳಿಯಲಿಲ್ಲ. ಒಂದೇ ಆನಂದದ ಪ್ರವಾಹದಲ್ಲಿ ತೇಲಿಕೊಂಡು ಎಲ್ಲಿಗೋ ಹೋದೆ. ಆ ಪ್ರವಾಹದ ಓಟದಲ್ಲಿ ತೇಲಿಕೊಂಡು ಹೋಗುವುದು ನಿನ್ನ ತೊಡೆಯಮೇಲೆ ಮಲಗುವಹಾಗೆ ಇತ್ತು. ಆ ಬಳಿಕ ಅದೂ ಗೊತ್ತಾಗಲಿಲ್ಲ. ಒಮ್ಮೆಗೇ ನಾನೇ ಇಲ್ಲದಂತೆ. ಇದು ಏನು ಮಾಯೆ ಕೃಷ್ಣಾ?'

ಕೃಷ್ಣ ಬದಲು ಮಾತಾಡದೆ ಮುಗುಳ್ನಗೆ ನಕ್ಕ.

ಮತ್ತೆ ಕೇಳಿದಳು ಹೆಳವಿ. ಎರಡು ಕೈಗಳನ್ನೂ ಮುಗಿದು ಬೇಡಿದಳು. 'ಕೃಷ್ಣಾ! ಏನು ಮಾಡಿದೆಯೆಂದು ಹೇಳಲಾರೆಯಾ? ನಾನು ಹುಟ್ಟಿದಾರಭ್ಯ ಹೆಳವಿ. ಓಡಾಡುವ ಆನಂದವನ್ನು ಅರಿತವಳಲ್ಲ. ಆದರೆ ನೀನು ಕೊಳಲನ್ನು ಊದಲು ಪ್ರಾರಂಭಿಸಿದೊಡನೆ ನಾನು ನಿನ್ನೊಡನೆ ಬಗೆಬಗೆಯ ಆಟಗಳನ್ನೆಲ್ಲ ಆಡಿದೆ; ಓಡಿದೆ. ನೀನು ಬಚ್ಚಿಟ್ಟುಕೊಂಡೆ; ನಾನು ಹುಡುಕಿದೆ. ಇಬ್ಬರೂ ಕೈಸೇರಿಸಿ ಚಕ್ರದಹಾಗೆ ಗಿರಗಿರನೆ ಸುತ್ತಿದೆವು. ತಟಕ್ಕನೆ ನನ್ನನ್ನು ನಿನ್ನ ಬಳಿಗೆಳೆದುಕೊಂಡೆ. ಕೂಡಲೆ ನಾನೇ ಇಲ್ಲವಾದೆ.

ಕರುಣಾಪೂರ್ಣದೃಷ್ಟಿಯಿಂದ ಅವಳಕಡೆ ನೋಡಿ ಅವಳ ಮುಖದ ಮೇಲೆ ಓಲಾಡುತ್ತಿದ್ದ ಮುಂಗುರುಳುಗಳನ್ನು ಸರಿಮಾಡಿದ ಕೃಷ್ಣ. ತನ್ನ ಕೊಳಲ ಸಂಗೀತಕ್ಕಿಂತಲೂ ಇಂಪಾದ ಧ್ವನಿಯಲ್ಲಿ ಹೇಳಿದ. 'ಮಗು, ನಾನು ಯಾವ ಮಾಟವನ್ನೂ ಮಾಡಲಿಲ್ಲ. ನನ್ನ ಹೃದಯದ ದುಃಖವನ್ನು ಸಂಗೀತದ ರೂಪದಲ್ಲಿ ಹರಿಯಿಸಿದೆ. ಬೆಳಗ್ಗೆ ನನ್ನ ಮನಸ್ಸು ಉಲ್ಲಾಸವಾಗಿತ್ತು. ಸಂಜೆಗೆ ರಾಧೆಯ ಬಳಿಗೆ ಓಡಿದೆ. ಅವಳು ನನ್ನನ್ನು ಅಟ್ಟಿಬಿಟ್ಟಳು; ಹೊರಗೆ ತಳ್ಳಿಬಿಟ್ಟಳು. ನನ್ನ ಪ್ರಾಣ ಎರಡಾಯಿತು. ನನ್ನ ಮತ್ತೊಂದು ಅರ್ಧ ಬೇರೆಯಾಗಿ ನಿಂತಿತು. ಆ ದುಃಖವೇ ಕೊಳಲಲ್ಲಿ ಧ್ವನಿಸಿದ್ದು. ಮಗು, ನಿನಗೆ ಗೊತ್ತಿಲ್ಲ. ನೀವೆಲ್ಲ ಕೃಷ್ಣನನ್ನು ಹುಡುಕಿ ಅಲೆಯುತ್ತಿರುವಹಾಗೆ ಹೇಳುತ್ತೀರಿ. ರಾಧೆಯೂ ಹಾಗೆಯೇ ಎಣಿಸುತ್ತಾಳೆ. 'ನಾನು ಅವನನ್ನು ಹುಡುಕಿ ಹುಡುಕಿ ಹಾತೊರೆಯುತ್ತಿದ್ದೇನೆ. ಆ ಕಳ್ಳ ಎಲ್ಲೆಲ್ಲೊ ಓಡಿಹೋಗುತಾನೆ' ಎಂದು ತಿಳಿದಿದ್ದಾಳೆ. ಅದರಿಂದ ಅವಳೂ—ನೀವೆಲ್ಲ ನನ್ನನ್ನು ನೋಯಿಸುತ್ತಿದ್ದೀರಿ. ನನ್ನ ಹೃದಯವನ್ನು ವ್ಯಥೆಯಿಂದ, ನೋವಿನಿಂದ ತುಂಬುತ್ತಿದ್ದೀರಿ. ಆದರೆ ನನ್ನ ಪ್ರಾಣ ನಿಮ್ಮನ್ನು ಹುಡುಕಿ ಹುಡುಕಿ ಅಲೆಯುತ್ತದೆ. ಆಗ ನಾನು ಕೊಳಲು ಬಾರಿಸುತ್ತೇನೆ. ನನ್ನ ಕೊಳಲು ಕೂಗಿ ಕರೆಯುತ್ತದೆ. ಆ ಧ್ವನಿಯೇ ನನ್ನ ಕೊಳಲಿನ ನಾದ. ಯಾವ ಗಳಿಗೆಗೆ ನಿಮಗದು ಕೇಳಿಸುತ್ತದೆಯೋ......!'

ಬಾಗಿಲ ಹೊರಗೆ, ಒಳಂಗಳದಲ್ಲಿ ಯಾರೋ ಬಿಕ್ಕಿ ಬಿಕ್ಕಿ ಅಳುವ ಸದ್ದು ಕೇಳಿ, ಕೃಷ್ಣ ಮಂಚಬಿಟ್ಟು ಓಡಿದ. ಅವನನ್ನು ಕಂಡೊಡನೆ 'ಕೃಷ್ಣಾ' ಎಂದು ಆರ್ತಸ್ವರದಿಂದ ಅವನ ಕೈಗಳಲ್ಲಿ ಬಿದ್ದಳು – ರಾಧೆ.



# ತೀರದ ಹಲುಬು

**ಶ್ರೀಮಾನ್ ಟಿ. ಎನ್. ಸುಬ್ರಮಣ್ಯಂರವರು** ಹೆಸರುವಾಸಿಯಾದ ಬರಹಗಾರರು. ಮೆಡ್ರಾಸ್ ಫಂಡ್ಸ್ ಲಿಮಿಟೆಡ್ ಎಂಬ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ವಿರಾಮ ದೊರೆತಾಗಲೆಲ್ಲಾ ಬರೆಯುತ್ತಾರೆ. ಭಾಷೆ ಇವರದು ಬಲು ಬಿಗಿ.

ಸಾಮಾನ್ಯವಾಗಿ ಇವರು ಕತೆಗಳನ್ನು ಕಟ್ಟಿ ಬರೆಯುವುದಿಲ್ಲ. ಪುರಾತತ್ವಶಾಸ್ತ್ರದಲ್ಲಿ ಇವರಿಗೆ ಬಹಳ ಅಭಿರುಚಿ. ಐತಿಹಾಸಿಕ ಸಂಗತಿಗಳನ್ನು ಆರಿಸಿ ಅವುಗಳ ಆಧಾರದ ಮೇಲೆ ಕತೆಗಳನ್ನು ಕಲ್ಪಿಸುತ್ತಾರೆ. ಹೈದರ್, ಟಿಪ್ಪು ಇವರುಗಳ ಕಾಲಕ್ಕೆ ಸಂಬಂಧಪಟ್ಟ ಹಲವು ಕತೆಗಳನ್ನು ಬರೆದಿದ್ದಾರೆ. ಅವುಗಳನ್ನು ಒಂದು ಸಂಗ್ರಹದಲ್ಲಿ ಕೂಡಿಸಿದ್ದಾರೆ. ಆ ಸಂಗ್ರಹದಿಂದ ಈ ಕತೆಯನ್ನು ಎತ್ತಿ ಕೊಡಲಾಗಿದೆ.

೧

'ಏನೋ, ಮಗು! ಇನ್ನೂ ಎಷ್ಟು ದಿನಗಳು ಹೀಗೆ....'

'ಯಾಕಪ್ಪ, ಮತ್ತೆ ಮತ್ತೆ ಅದೇ ಪಲ್ಲವಿ.... ಸ್ವಲ್ಪ ಹೋಗಲಿ, ನೋಡೋಣ.'

ತಾಯಿಗೋ ಮನಸ್ಸು ನಿಲ್ಲಲಿಲ್ಲ.

'ಇಷ್ಟು ದಿನವೂ ಆಡಿ ಹಾಡಿ ಅಲೆದುದಾಯಿತು. ಇನ್ನಾದರೂ ಒಕ್ಕಲುತನ ಮಾಡಿಕೊಂಡು ಸಂಸಾರಿಯಾಗಿರಬೇಡವೆ?'

ತನ್ನ ಮಗನನ್ನು ಇನ್ನು ಎಲ್ಲಿಗೂ ಕಳುಹಿಸದೆ ಹಿಡಿದು ಇಟ್ಟು ಕೊಳ್ಳಬೇಕೆಂದು ಬಯಸಿದಳು ಆಕೆ. ಒಂದುಸಾರೆ ಪಟ್ಟಪಾಡು ಸಾಲದೆ?

‡ ‡ ‡ ‡

ಅವನನ್ನು ಜೀವದೊಡನೆ ಕಾಣುವುದಾಗಿ ಆಕೆ ಬಗೆದಿರಲಿಲ್ಲ. ನಾಲ್ಕು ಕುದುರೆ ಕಟ್ಟಿದ 'ಕೋಚ್' ಗಾಡಿಯಲ್ಲಿ ಬಂದು ಅವನು ತನ್ನ ಮನೆ ಬಾಗಿಲಲ್ಲಿ ಇಳಿದಾಗಲೂ ಆಕೆಗೆ ಅವನನ್ನು ಗುರುತಿಸಲು ಆಗಲಿಲ್ಲ.

'ಅಮ್ಮಾ, ನಿಮ್ಮ ಹುಡುಗನೊಬ್ಬನು ಹಿಂದೂಸ್ತಾನದಲ್ಲಿದ್ದನಲ್ಲ, ಜ್ಞಾಪಕವಿದೆಯೆ?' ಎಂದು ಕೇಳಿದನು ಅವನು.

'ಹೌದು.... ಇದ್ದ; ಎಲ್ಲೋ ಯುದ್ಧದಲ್ಲೊ..... ಜಗಳ ದಲ್ಲೋ ತೀರಿಕೊಂಡ' ಎಂದು ಆಕೆ ದುಃಖವನ್ನು ಗಂಟಲಲ್ಲೇ ಅಡಗಿಸಿ ಕೊಂಡು ಹೇಳಿದಳು.

'ತೀರಿಕೊಂಡನೆಂಬುದನ್ನು ನೀವು ನಿಶ್ಚಯವಾಗಿ ಹೇಳಲು ಸಾಧ್ಯವೆ? ಅವನು ಎಲ್ಲಾದರೂ ಉಸಿರೊಡನೆ ಇದ್ದು, ಮತ್ತೆ ತಪ್ಪಿಸಿ ಕೊಂಡು ಬರಲಿಕ್ಕಾಗದೇನು?'

'ಅದೆಲ್ಲ ಇಲ್ಲ; ಉಸಿರೊಡನೆ ಇದ್ದಿದ್ದರೆ ಈ ಹತ್ತು ವರ್ಷಗಳಲ್ಲಿ ಒಂದು ಕಾಗದ ಸಹಿತ ಇಲ್ಲದೆ ಹೋಗುತ್ತಿತ್ತೆ? ನನಗೆ ಬರೆಯದೆ ಹೋದರೂ, ಅವನ ಸಹೋದರಿಗಾದರೂ ಬರೆಯುತ್ತಿರಲಿಲ್ಲವೆ?' ಎಂದು ಹೇಳಿದಳು.

‘ಆ ಹುಡುಗ ತೀರಿಕೊಂಡಿಲ್ಲ. ನಾನೇ ಅವನು. ನಿಮ್ಮ ಎದುರಿನಲ್ಲಿ ನಿಂತಿದ್ದೇನೆ; ನನ್ನ ಗುರುತು ಹತ್ತಲಿಲ್ಲವೆ?’ ಎಂದು ಎಷ್ಟೋ ಹೇಳಿದನು.

ತಾಯಿಗೆ ತನ್ನ ಮಗನ ಗುರುತು ಹತ್ತಲಿಲ್ಲ. ಅಷ್ಟೊಂದು ಬದಲಾಯಿಸಿ ಹೋಗಿದ್ದ ಅವನು.

ತಂಪು ಪ್ರದೇಶವಾದ ಇಂಗ್ಲೆಂಡಿನಲ್ಲಿ ಸುಖವಾಗಿ ಬದುಕುವುದನ್ನು ಬಿಟ್ಟು ಝಳಝಳ ಬಿಸಿಲು ಕಾಯುವ ಹಿಂದೂಸ್ತಾನಕ್ಕೆ ಹೋದ ಅವನನ್ನು ಇತರರು ಸುಲಭವಾಗಿ ಗುರುತಿಸದೆ ಹೋದದ್ದು ಅವರ ತಪ್ಪಲ್ಲ. ಅಷ್ಟಕ್ಕೋ ಅವನ ಬದುಕೇ ಸಂಪೂರ್ಣವಾಗಿ ಬದಲಾಯಿಸಿ ಹೋಗಿತ್ತು.

ಮುಖವು ಕಪ್ಪಾಗಿ ಅಂದಗೆಟ್ಟಿತ್ತು. ಕಷ್ಟಗಳನ್ನನುಭವಿಸಿದ ಅವನ ದೇಹವು ದಪ್ಪಗೆ ಗಟ್ಟಿಯಾಗಿ ಒರಟುಒರಟಾಗಿ ಕಾಣುತ್ತಿತ್ತು. ಆಂಗ್ಲೇಯರ ಹಾಗೆ ಷರಾಯಿ, ಕೋಟು, ಬೂಟ್ಸು, ಟೊಪ್ಪಿಗೆ ಮೊದಲಾದುವನ್ನು ಹಾಕಿಕೊಳ್ಳುವುದು ಅವನಿಗೆ ಅಸಹ್ಯವಾಗಿತ್ತು. ನೋಡುವುದಕ್ಕೆ ಆಫ್ರಿಕಾ ದೇಶದ ನೀಗ್ರೊ ಜನರ ಹಾಗೆ ಇದ್ದ; ತನ್ನ ದೇಶದಲ್ಲಿಯೇ ಪರಕೀಯನಂತೆ ಕಾಣುತ್ತಿದ್ದ ಅವನು.

ತಾಯಿನಾಡಿಗೆ ಹಿಂತಿರುಗಿದ ಅವನು ತನ್ನ ತಾಯಿಯನ್ನು ನೋಡಲು ಲಂಡನ್ ನಗರದಿಂದ ಹಳ್ಳಿಯ ಕಡೆಗೆ ಹೊರಟ. ಆ ಕಾಲದಲ್ಲಿ ರೈಲುಗಾಡಿ ಇಲ್ಲ. ಟಪಾಲುಗಾಡಿಯೆನಿಸಿದ ‘ಕೋಚ್’ ಅನ್ನೇ ಹತ್ತಿ ಹೊರಡಬೇಕು. ದಾರಿಯಲ್ಲಿ ಹಲವೆಡೆಗಳಲ್ಲಿ ನಿಂತು ನಿಂತು ಹೋಗುತ್ತಿತ್ತು ಆ ಗಾಡಿ.

ದಾರಿಯಲ್ಲಿ ಅವನು ಇತರ ಪ್ರಯಾಣಿಕರೊಡನೆ ಹೋಟಲಿಗೆ ಹೋದ. ಅಲ್ಲಿ ಮೇಜಿನ ಬಳಿಗೆ ಕುರ್ಚಿಯನ್ನು ಎಳೆದುಕೊಂಡು ಕೂಡುವುದಕ್ಕೆ ಬಹಳ ಶ್ರಮಪಟ್ಟು ಹೋದ. ಇತರರ ಹಾಗೆ ಚಾಕು, ಫೋರ್ಕ್, ಮೊದಲಾದುವನ್ನು ತೆಗೆದುಕೊಂಡು ತಿನ್ನಬೇಕೆಂಬುದು ಸಹ ತಿಳಿಯಲಿಲ್ಲ. ದೇವರು ಕೊಟ್ಟ ಕೈಗಳಿಂದಲೇ ತಿನಸನ್ನು ತೆಗೆದು ಬಾಯಿಗೆ ಹಾಕಿ

ಕೊಂಡ. ತನಗೆ ಬೇಕಾದ ಪದಾರ್ಥವನ್ನು ಹಾಗೆಯೇ ಪಕ್ಕದಲ್ಲಿ ಸುರಿದು ಬಿಟ್ಟ. ಕೆಳಗೆ ಹಾಸಿದ್ದ ಕಂಬಳಿ ಹಾಳಾಗುತ್ತಲ್ಲ ಎಂಬುದನ್ನು ಸಹಿತ ಅವನು ಗಮನಿಸಲಿಲ್ಲ. ನೋಡಿದವರಿಗೆ ಅವನ ನಡತೆ ಕಾಡುಜನರ ನಡವಳಿಕೆಯಂತೆಯೇ ಇತ್ತು.

ಕಾಲಿಗೆ ಚಪ್ಪಲಿ, ನಡುವಿನಲ್ಲಿ ಒಂದು ಬಟ್ಟೆ, ಮೇಲೆ ಒಂದು ಕುರ್ತ, ತಲೆಯಲ್ಲಿ ಒಂದು ಮುಂಡಾಸು, ಇಂಥ ಅಲಂಕಾರದಲ್ಲಿ ಅವನು ಬೀದಿಗಿಳಿದರೆ ಬೀದಿ ಅಲೆಯುವ ಹುಡುಗರ ಗುಂಪೊಂದು ಸೇರುತ್ತಿತ್ತು. ಹೋಗುವವರು ಬರುವವರು ಎಲ್ಲಾ ಈ ನೋಟವನ್ನು ನೋಡುತ್ತ ನಿಂತುಬಿಡುವರು. ಹುಚ್ಚನೆಲ್ಲಾದರೂ ಆಸ್ಪತ್ರೆಯಿಂದ ತಪ್ಪಿಸಿಕೊಂಡು ಬಂದನೋ ಎಂದು ಸಂದೇಹಗೊಂಡರು ಹಲವರು.

ಆಸಾಮಿ ಹೇಗಿದ್ದರೇನು? ಹಣವಿದ್ದರೆ ಸಾಲದೆ? ಇಂಗ್ಲೆಂಡಿಗೆ ಬಂದನಂತರ, ತಾನು ಯಾರೆಂಬುದನ್ನು ಪ್ರಮಾಣಪಡಿಸಿದೊಡನೆ ಅಧಿಕಾರಿಗಳು ಹತ್ತು ವರ್ಷಗಳ ಸಂಬಳದ ಬಾಕಿಯನ್ನು ಕೊಟ್ಟರು; ಬದುಕಿ ಇರುವವರೆಗೂ ವರ್ಷವೊಂದಕ್ಕೆ ಇಷ್ಟೆಂದು ಪೆನ್ಷನನ್ನೂ ನಿಗದಿ ಮಾಡಿದರು. ಮತ್ತೆ ಕೇಳುವುದೇನು?

ಅಂಥವನ ಬಳಿ ಬಂದು ಯಾರು ತಾನೇ ಬದುಕುಮಾಡುವರೆಂದು ಕೇಳಬಹುದು? ಆದರೆ ಕಾಲವು ಈಗಿನಂತೆ ಇರಲಿಲ್ಲ—ನೂರೈವತ್ತು ವರ್ಷಗಳ ಹಿಂದೆ. ಆಗ ಇಂಗ್ಲೆಂಡಿನಲ್ಲಿಯೂ ಮದುವೆಗಳನ್ನು ತಾಯಿ-ತಂದೆಯೇ ನಿಶ್ಚಯಿಸಿ ನೆರವೇರಿಸುತ್ತಿದ್ದರು. ಹಾಗೆಯೇ ಜೇಮ್ಸ್ ಸ್ಕರ್ರಿ ಎಂಬುವನಿಗೂ ಅವನ ತಾಯಿ ಮದುವೆ ಮಾತಬಯಸಿದಳು. ತನ್ನ ತಾಯಿ ಮದುವೆಯಮಾತು ಎತ್ತಿದಾಗಲೆಲ್ಲಾ ಅವನ ಮುಖವು ಸಪ್ಪಗಾಗುತ್ತಿತ್ತು. ಏನು ಮಾಡಿಯಾನು! ಹಳೆಯ ಸಂಗತಿಗಳನ್ನೆಲ್ಲ ಅವನಿಂದ ಮರೆಯಲಾಗಲಿಲ್ಲ.

'ನಿಜವಾಗಿಯೂ ನಾನು ಮದುವೆಯಾಗದವನೆ? ಹೆಂಡತಿಯಿಲ್ಲದವನೆ? ಒಬ್ಬಾಕೆ ಬದುಕಿರುವಾಗ ಮತ್ತೊಬ್ಬಳನ್ನು ದೇವರೆದುರಿನಲ್ಲಿ

ಆಣೆಯಿಟ್ಟು ಮನಸ್ಪೊಪ್ಪಿ ಮದುವೆಯಾಗಬಹುದೆ? ಅದು ಸರಿಯೆ?' ಹೀಗೆಲ್ಲಾ ಯೋಚಿಸುವನು.

ದಕ್ಷಿಣ ಹಿಂದೂಸ್ತಾನದ ಕರ್ನಾಟಕ ದೇಶದಲ್ಲಿ ಶ್ರೀರಂಗಪಟ್ಟಣದ ಬಳಿ ತಾನು ಬಿಟ್ಟು ಓಡಿಬಂದ ಆ ಹೆಣ್ಣುಮಗಳ ಗತಿ ಏನಾಯಿತೋ ಎಂದು ಯೋಚಿಸುವನು. ಆ ನಾಡಿನಲ್ಲಿ ಈ ಚಿಂತೆ ಅವನನ್ನು ಬಾಧಿಸಿರಲಿಲ್ಲ. ಆಗೆಲ್ಲಾ ಅವನಿಗೆ ತನ್ನ ತಾಯಿನಾಡಿನ ನೆನಪು. ಈಗಲೋ ಹಳೆಯ ನೆನಪುಗಳೆಲ್ಲ ಒಂದರಹಿಂದೊಂದಾಗಿ ಅವನ ಮನಸ್ಸಿನ ಪರದೆಯ ಮೇಲೆ ಹಾದು ಮರೆಯಾಗುತ್ತಿದ್ದವು.

೨

'ಯಾವಾಗ ಹೊರಡುವುದು'

'ಏನು?'

'ಸೈನ್ಯದ ಪಡೆ ಹೋಗುವುದಲ್ಲ?'

'ಯಾರು ಹೇಳಿದರು?'

'ಅವಳೇ ಮುಗದೂಮ್ ಬೀ. ಈ ದಿನ ಹೊರಡುವನೆಂದು ಹೇಳಿದಳಲ್ಲ.'

'ಯಾವ ಮುಗದೂಮ್ ಬೀ?'

'ಅವಳೇ ನಾಲ್ಕನೆ ಮನೆಯವಳು. ಅಬ್ದುಲ್ ಖಾದರನ ಹೆಂಡತಿ.'

'ಏನು? ಎಷ್ಟುದಿನ ನಾನು ನಿನಗೆ ಹೇಳುವುದು ಹೀಗೆ ನನ್ನಬಳಿ ಮಾತನಾಡಬೇಡ ಎಂದು?'

'ಇಲ್ಲ, ಇಲ್ಲ. ಕೋಪಿಸಿಕೊಳ್ಳಬೇಡಿ. ಬಾಯಿತಪ್ಪಿ ಬಂತು. ಕ್ಯಾಪ್ಟನ್ ವಿಲಿಯಮ್ ಡ್ರೇಕನ ಭಾರ್ಯೆ, ಮಿಸೆಸ್ ಡ್ರೇಕ್ ಹೇಳಿದಳು.'

ಅದಕ್ಕೆ ಏನೂ ಉತ್ತರ ಬರಲಿಲ್ಲ. ಸ್ವಲ್ಪ ಹೊತ್ತು ಆ ಕೋಣೆಯಲ್ಲಿ ನಿಶ್ಶಬ್ದವು ನೆಲೆಯಾಗಿತ್ತು.

ರಾತ್ರಿ ಹತ್ತು ಘಂಟೆಯಿರಬಹುದು. ಶ್ರೀರಂಗಪಟ್ಟಣದ ಹೊರಗಡೆ ಒಂದು ಚಿಕ್ಕ ಗುಡಿಸಿಲಿನ ಮುಂಭಾಗದ ಕೋಣೆಯಲ್ಲಿ ಅವರು

ಕುಳಿತಿದ್ದರು. ಅಮಾವಾಸ್ಯೆಯ ಕಾಲ. ಎಲ್ಲೆಲ್ಲೂ ಕತ್ತಲು. ಗುಡಿಸಿಲಿನ ಹೊರಗೆ ನಡೆದು ಹೋಗುವವರನ್ನು ಒಳಗಿರುವವರು ಸುಲಭವಾಗಿ ಗುರುತುಹಿಡಿಯಲು ಸಾಧ್ಯವಿರಲಿಲ್ಲ.

ಕೋಣೆಯೂ ದೊಡ್ಡದಲ್ಲ. ಚಿಕ್ಕದೇನೆ. ಒಂದು ಹಣತೆಯಲ್ಲಿ ದೀಪವು ಮಂದವಾಗಿ ಉರಿಯುತ್ತಿತ್ತು. ಅದರಲ್ಲಿ ಸಂಸಾರಕ್ಕೆ ಬೇಕಾದ ಸಾಮಾನುಗಳೂ ಹೆಚ್ಚಾಗಿರಲಿಲ್ಲ. ಆ ಗುಡಿಸಿಲನ್ನೂ ಅದರಲ್ಲಿದ್ದ ಸಾಮಾನುಗಳನ್ನೂ ನೋಡಿದರೆ ಅವರು ಬಡತನದಲ್ಲೇ ಬದುಕನ್ನು ನೂಕುತ್ತಿದ್ದಾರೆಂಬುದು ಸ್ಪಷ್ಟವಾಗುತ್ತಿತ್ತು. ಆದರೂ ಒಂದು ಪುಟ್ಟ ಸಂಸಾರಕ್ಕೆ ಬೇಕಾದ ಸಾಮಾನುಗಳು ಅಲ್ಲಿ ಇದ್ದವು. ಬಹುಶಃ ಅವರು ಕಷ್ಟಗಳನ್ನನುಭವಿಸದೇನೇ ಬದುಕುಮಾಡಿರಬಹುದು.

ಕೋಣೆಯ ಮಧ್ಯದಲ್ಲಿ ಒಂದು ಜದಿರ ಚಾಪೆ ಹಾಸಿತ್ತು. ಅದರ ಮೇಲೆ ಚಿಕ್ಕ ವಯಸ್ಸಿನ ಹೆಣ್ಣುಮಗಳೊಬ್ಬಳು ತನ್ನ ಮಗುವನ್ನು ಇಟ್ಟುಕೊಂಡು ಕುಳಿತಿದ್ದಳು. ಅವಳಿಗೆ ಹದಿನೇಳು ಅಥವಾ ಹದಿನೆಂಟು ವರ್ಷ ವಯಸ್ಸಿರಬಹುದು. ಕಪ್ಪೇನೆ. ಆದರೂ ಅವಳ ಮುಖವು ನೋಡುವುದಕ್ಕೆ ಅಸಹ್ಯವಾಗಿರಲಿಲ್ಲ. ಕಳಕಳನೆ ಅಂದವಾಗಿಯೇ ಇತ್ತು. ಅವಳು ಉಚ್ಚಕುಲವೊಂದರಲ್ಲಿ ಹುಟ್ಟಿದವಳೆಂಬುದು ಮುಖಛಾಯೆಯಿಂದ ಕಾಣುತ್ತಿತ್ತು.

ಅವಳು ಬಣ್ಣಬಣ್ಣದ ಬಟ್ಟೆಯ ಪಾವಡೆಯನ್ನು ಉಟ್ಟು ಕರಿ ಕುಪ್ಪಸವನ್ನು ತೊಟ್ಟಿದ್ದಳು. ಅದರ ಮೇಲೆ ಒಂದು ಸಾದಾ ಬಣ್ಣದ ಮೇಲ್ಬಟ್ಟೆಯನ್ನು ತಲೆಯಮೇಲೆ ತಂದು ಬುರಕಿ ಹಾಕಿಕೊಂಡಿದ್ದಳು. ಆ ಬುರಕಿ ಸರಿದು ಹಿಂದಕ್ಕೆ ಬಿದ್ದಿತ್ತು. ಅದರಿಂದ ಅವಳು ಕಿವಿಯಲ್ಲಿ ಸಾಲಾಗಿ ಹಾಕಿಕೊಂಡಿದ್ದ ಮುರುವುಗಳು ಚೆನ್ನಾಗಿ ಕಾಣುತ್ತಿದ್ದವು.

ಪಕ್ಕದಲ್ಲಿ ಚಾಪೆಯಮೇಲೆ ಒಂದು ಚಿಂದಿಬಟ್ಟೆಯ ತುಂಡು ಇತ್ತು. ಅವಳ ಮಗು ಅದರಮೇಲೆ ಮಲಗಿ ನಿದ್ರಿಸಿತ್ತು. ಸ್ವಲ್ಪ ಹೊತ್ತಿನ ಹಿಂದೆ ಅವಳು ಆ ಮಗುವನ್ನು ಎತ್ತಿಕೊಂಡು ಮುದ್ದಾಡಿಸುತ್ತಿದ್ದಳು.

ಆ ಮಗುವಿಗೆ ಒಂದೂವರೆ ವರ್ಷ ವಯಸ್ಸಿರಬಹುದು. ಅದು

ಹುಟ್ಟಿ ಹದಿನಾರು ತಿಂಗಳಾಗಿತ್ತು. ಗಂಡು ಮಗು. ತಾಯಿಯಹಾಗೆ ಅದು ಕಪ್ಪಲ್ಲ. ಕೆಂಪು ಎಂದೇ ಹೇಳಬೇಕು. ಅದು ತನ್ನ ತಾಯಿಯನ್ನೂ ಪಕ್ಕದಲ್ಲಿದ್ದ ಯುವಕನನ್ನೂ ನೋಡಿ ನಗುತ್ತಿತ್ತು.

ಆ ಹೆಣ್ಣುಮಗಳ ಎದುರಿನಲ್ಲಿ ಬಿದಿರು ಚಾಪೆಯ ಬದಿಗೆ ಒಬ್ಬ ಯುವಕನು ಸರಿಯಾಗಿ ನೆಲದಮೇಲೆ ಕೂಡದೆ ಮಂಡಿಯನ್ನೂರಿ ಕುಳಿತಿದ್ದ. ಅವನಿಗೆ ಆಗ ಇಪ್ಪತ್ತೈದು ವರ್ಷ ವಯಸ್ಸಿರಬಹುದು. ಅವನ ಮೈಮೇಲಿದ್ದ ಉಡುಪು ಅವನು ಒಬ್ಬ ಮುಸಲ್ಮಾನನೆಂಬುದನ್ನು ಸಾರುತ್ತಿತ್ತು. ಅವನ ಮುಖವು ಚಿಂತೆಯಿಂದ ಕೂಡಿದುದಾಗಿ ಕಾಣುತ್ತಿತ್ತು.

ಅವನು ಅಚ್ಚಗೆಂಪು. ವಿಶಾಲವಾದ ಹಣೆ. ಉದ್ದವಾದ ಮೂಗು ಇದ್ದು ನೋಡುವುದಕ್ಕೆ ಸುಂದರವಾಗಿದ್ದ. ಬಿಸಿಲಿನಲ್ಲಿ ಅಲೆದು ಅವನ ದೇಹವು ಸ್ವಲ್ಪ ಕಪ್ಪಾಗಿಹೋಗಿತ್ತು. ಆದರೂ ಅವನ ಮುಖವು ಕುಂಕುಮದಂತೆ ಕೆಂಪಾಗಿದ್ದು ಅದೇ ಒಂದು ಬಗೆಯಾಗಿತ್ತು.

ಯುವಕನು ಆ ಹೆಣ್ಣುಮಗಳ ಗಂಡನೇ. ಅಷ್ಟು ಕೆಂಪಾದ ಅವನು ಕಪ್ಪಾದ ಹೆಣ್ಣುಮಗಳನ್ನು ಹೇಗೆ ಮದುವೆಯಾದನೆಂದು ನೋಡಿದವರು ಆಶ್ಚರ್ಯಪಡಬಹುದು. ಅವರ ಬದುಕು ಚೆನ್ನಾಗಿಯೇ ನಡೆದು ಬಂದಿತ್ತು.

'ಕಂದ! ಇಲ್ಲಿನೋಡು. ಅಪ್ಪ ಬಂದನ್ನೂ ಹೇಳುವುದಿಲ್ಲ ಎನ್ನುತ್ತಾರೆ' ಎಂದು ಮಗುವಿನ ಕಡೆ ನೋಡುತ್ತ ಮುದ್ದಿನಿಂದ ಹೇಳಿ ಅದನ್ನು ಎತ್ತಿಕೊಂಡು ಮುತ್ತಿಟ್ಟಳು ಆ ಹೆಣ್ಣುಮಗಳು. ಆದರೂ ಅವಳ ದೃಷ್ಟಿ ಆ ಯುವಕನನ್ನು ಬಿಟ್ಟು ಕದಲಲೇ ಇಲ್ಲ.

ಅವಳ ಕಣ್ಣುಗಳಿಂದ ಒಂದುಬಗೆಯ ಕಾಂತಿ ಹೊರಚಿಮ್ಮುತ್ತಿತ್ತು. ಗಾಢವಾದ ಪ್ರೇಮದಿಂದ ಅವಳ ದೃಷ್ಟಿ ಅವನ ಮೇಲೆ ನೆಟ್ಟುಹೋಗಿದ್ದ ಆ ದೃಶ್ಯವನ್ನು ವರ್ಣಿಸಲು ಸಾಧ್ಯವಿಲ್ಲ. ತನ್ನ ಇನಿಯನನ್ನು ಹಾಗೆಯೇ ಎತ್ತಿ ನುಂಗಿಬಿಡುವಹಾಗೆ ನೋಡುತ್ತಿದ್ದಳು ಅವಳು. ಆದರೆ ಅವಳ ಹೃದಯದಲ್ಲಿ ಯಾವುದೋ ಒಂದು ನೋವು ತಲೆದೋರಿತ್ತು. ತನ್ನ ದೃಷ್ಟಿಯನ್ನು ಅವನ ಕಡೆಯಿಂದ ಬಿಡಿಸಿ ಕದಲಿಸಲಾಗಲಿಲ್ಲ ಅವಳಿಗೆ.

ಆ ಯುವಕನಿಗಾದರೂ ಅದು ತಾಕಲೇ ಇಲ್ಲ. ಅವಳನ್ನು ತಲೆಯೆತ್ತಿ ನೋಡಲು ಆಗಲಿಲ್ಲ ಅವನಿಗೆ. ತಲೆಯನ್ನು ತಗ್ಗಿಸಿಕೊಂಡೇ ಕುಳಿತಿದ್ದ.

೩

ಒಂದು ಘಳಿಗೆಯಲ್ಲಿ ಅವನು ಏನೇನು ಬಗೆದನೊ? ಅವನ ಕೈಲಿ ಮನಸ್ಸನ್ನು ಕಟ್ಟಿರಿಸಲಾಗಲಿಲ್ಲ. ಯಾವ ರೀತಿಯಲ್ಲೂ ಒಂದು ತೀರ್ಮಾನಕ್ಕೆ ಬರಲು ಆಗಲಿಲ್ಲ.

'ನನ್ನಮೇಲೆ ಇಷ್ಟೊಂದು ಪ್ರೀತಿಯಿಟ್ಟವಳನ್ನು, ನನ್ನ ಹೆಂಡತಿಯನ್ನು, ನನ್ನ ಮುದ್ದು ಕಂದನ ತಾಯಿಯನ್ನು, ಬಿಟ್ಟುಬಿಡಬಹುದೇ? ಇವಳಿಗೆ ಹೇಳದೆ ಓಡಿಹೋಗುವುದು ಸರಿಯೆ? ಇವಳು ಜೊತೆಯಲ್ಲಿ ಬರುವಳೇನು? ಬಂದರೆ ಇವಳನ್ನು ಕರಕೊಂಡು ಹೋಗುವುದು ಯಾವ ತೊಡಕೂ ಇಲ್ಲದೆ ಸುಲಭವಾಗಿರುವುದೆ? ಅಲ್ಲದೆ ಸಿಕ್ಕಿಬಿದ್ದರೆ ಗತಿಯೇನು? ಒಂದುವೇಳೆ ಇವಳು ಜೊತೆಯಲ್ಲಿ ಬರಲು ನಿರಾಕರಿಸಿ ಸಂಗತಿಯನ್ನು ಹೊರಪಡಿಸಿದರೆ ಏನು ಮಾಡುವುದು?' ಎಂದೆಲ್ಲಾ ಯೋಚನೆಗಿಟ್ಟುಕೊಂಡಿತು ಅವನ ಮನಸ್ಸು.

ಹೌದು, ಈಗ ಆ ಹೆಣ್ಣುಮಗಳನ್ನು ಅಗಲಿ ಹೋಗಲು ಇಷ್ಟು ಚಿಂತಿಸುತ್ತಾನಲ್ಲವೆ; ಅವಳನ್ನು ಮದುವೆಯಾದ ಕಾಲದಲ್ಲಿಯೋ ಆ ಯುವಕನು ಅವಳ ಮುಖವನ್ನು ನೋಡಲು ಸಹಿತ ಇಷ್ಟಪಡಲಿಲ್ಲ. ಅವಳನ್ನು ಬೇಕುಬೇಕೆಂದೇ ದ್ವೇಷಿಸುತ್ತಿದ್ದ. ಅದನ್ನು ಹೊರಗಡೆ ತೋರ್ಪಡಿಸುವುದಕ್ಕೂ ಹಿಂತೆಗೆಯಲಿಲ್ಲ.

ಆಗ ಅವನು ಆ ಹೆಣ್ಣುಮಗಳನ್ನು ಕುತ್ತಿಗೆಗೆ ಕಟ್ಟಿಬಿದ್ದ ಒಂದು ಕಲ್ಲಿನಂತೆಯೂ ಸಂಸಾರ ನಡೆಸಲು ಬೇಕಾಗುವ ವಸ್ತುಗಳಲ್ಲೊಂದರಂತೆಯೂ ಎಣಿಸಿದನು. ಅವಳನ್ನು ಬಿಟ್ಟುಬಿಡುತ್ತಲೂ ಇದ್ದ. ಆದರೆ ಹೊಟ್ಟೆ ಹೊರೆಯಬೇಕಲ್ಲ. ಆದುದರಿಂದಲೇ ಸಹಿಸಿಕೊಂಡು ಸುಮ್ಮನಿದ್ದ.

ಇದು ಆರು ವರ್ಷಗಳಿಗೆ ಹಿಂದೆ ನಡೆದ ಸಂಗತಿ. ಆಗ ಆ ಯುವಕನು ತನ್ನಹಾಗಿದ್ದ ಇನ್ನೂ ನೂರುಮಂದಿಯೊಡನೆ ಭವ್ಯವಾದ ಧರ್ಮಶಾಲೆ

ಯೊಂದರಲ್ಲಿ ವಾಸಿಸುತ್ತಿದ್ದ. ಅವರೆಲ್ಲ ನಾಲ್ಕೈದು ಮಂದಿಯಂತೆ ಒಟ್ಟುಸೇರಿ ಅಲ್ಲಿ, ಇಲ್ಲಿ ಬೇಯಿಸಿಕೊಂಡು ತಿನ್ನುತ್ತಿದ್ದರು. ಅಡಿಗೆ ಮಾಡುವುದಕ್ಕೆ ಅವರಿಗೆ ಸರಿಯಾಗಿ ಬರುತ್ತಿರಲಿಲ್ಲ. ಅಕ್ಕಿ, ಬೇಳೆ, ತುಪ್ಪ ತರಕಾರಿ ಮುಂತಾದುವನ್ನು ಮಡಿಕೆಯಲ್ಲಿ ಹಾಕಿ ಹೇಗೋ ಬೇಯಿಸಿ ಹಸಿವನ್ನು ತೀರಿಸಿಕೊಳ್ಳುತ್ತಿದ್ದರು.

ಅವರೆಲ್ಲರೂ ಸೈನಿಕರು. ಎಳೇ ವಯಸ್ಸಿನ ಅವರು ತಪ್ಪಿಸಿಕೊಂಡು ಓಡಿಹೋಗದಂತೆ ಕಡುದಾದ ಕಾವಲಿತ್ತು. ಹೊರಗಿನವರ ಸಹಾಯ ವೇನೂ ಅವರಿಗೆ ಇರಲಿಲ್ಲ. 'ತನ್ನ ಕೈಯೇ ತನಗೆ ನೆರವು' ಎಂಬ ನಾಣ್ಣುಡಿಯಂತೆ ಸಾಗುತ್ತಿತ್ತು ಅವರ ಬದುಕು.

ಕುರಿಯ ಹಿಂಡಿನಂತೆ ದೂಡಲ್ಪಟ್ಟಿದ್ದ ಅವರಿಗೆ ಒಬ್ಬೊಬ್ಬರಿಗೆ ಒಂದೊಂದರಂತೆ ಪ್ರತ್ಯೇಕವಾಗಿ ಚಿಕ್ಕ ಗುಡಿಸಲುಗಳನ್ನು ಕಟ್ಟಿಸಿದರು. ಗುಡಿಸಲುಗಳು ಒಂದರ ಪಕ್ಕದಲ್ಲೊಂದರಂತೆ ಒಂದು ದೊಡ್ಡ ಮೈದಾನ ದಲ್ಲಿ ಇದ್ದವು. ಸಂಸಾರ ಮಾಡುವುದಕ್ಕೆ ಬೇಕಾಗುವ ಎಲ್ಲಾ ಸಾಮಾನು ಗಳನ್ನೂ ಶೇಖರಿಸಿ ಅಲ್ಲಿರಿಸಲಾಯಿತು. ಎಲ್ಲಾ ಸರಕಾರದ ವೆಚ್ಚವೇ.

ಎಂದಿನಂತೆ ಒಂದು ದಿನ ಬೆಳಗ್ಗೆ ಅವರೆಲ್ಲರನ್ನೂ ಕವಾತಿನ ಮೈದಾನಕ್ಕೆ ಕರೆದುಕೊಂಡು ಹೋಗಲಾಯಿತು. ರೂಢಿಯಂತೆ ಅವರು ಸಾಲಾಗಿ ಹೊರಟರು. ಮೈದಾನದಲ್ಲಿ ಅಂದು ಕಂಡ ದೃಶ್ಯವು ಅವರ ಮನಸ್ಸನ್ನು ಕದಡಿತು.

ಅಲ್ಲಿ ಒಂದು ಮೂಲೆಯಲ್ಲಿ ಬುರಕಿ ಹಾಕಿಕೊಂಡು ಇದ್ದ ಗೋಷಾ ಹೆಣ್ಣುಮಕ್ಕಳ ಒಂದು ಗುಂಪು ಇತ್ತು. ಬುರಕಿಯೊಳಗಿದ್ದವರು ಹೆಂಗ ಸರೊ ಭೂತಗಳೊ, ಚಿಕ್ಕವರೊ ಮುದುಕಿಯರೊ, ಸುಂದರರೊ, ಕುರೂಪಿಗಳೊ ಯಾರು ಕಂಡರು? ಸೈನಿಕರು ಸಾಲಾಗಿ ನಿಂತರು. ಅವರ ಜೊತೆಗಿದ್ದ ಅಧಿಕಾರಿ ಹಿಂದೂಸ್ತಾನಿಯಲ್ಲಿ ಏನೋ ಹೇಳಿದನು. ಸೈನಿಕರಲ್ಲಿ ಹಲವರಿಗೆ ಅದು ಸರಿಯಾಗಿ ಅರ್ಥವಾಗಲಿಲ್ಲ.

ಅಷ್ಟೆ. ಆ ಬುರುಕಿಯ ಗುಂಪಿನಲ್ಲಿದ್ದ ಅಳಂಗಳು ಚದುರಿದರು.

ಅವರು ಒಬ್ಬೊಬ್ಬರಾಗಿ ಬಂದು ಒಬ್ಬೊಬ್ಬ ಸೈನಿಕನ ಹಿಂದೆಯೂ ನಿಂತರು.

"ಹಿಂದಕ್ಕೆ ತಿರುಗಿ" ಎಂದು ಸೈನಿಕರನ್ನು ಕುರಿತು ಆಜ್ಞಾಪಿಸಿದನು ಅಧಿಕಾರಿ.

ಒಂದೇ ರೀತಿ ತಿರುಗಿದರು ಸೈನಿಕರೆಲ್ಲ. ಒಬ್ಬೊಬ್ಬರೆದುರಿನಲ್ಲೂ ಒಬ್ಬ ಹೆಣ್ಣಾಳು ನಿಂತಿದ್ದಳು.

"ಎದುರಿನಲ್ಲಿರುವವರನ್ನು ತೆಗೆದುಕೊಳ್ಳಿ" ಎಂದು ಘರ್ಜಿಸಿದನು ಅಧಿಕಾರಿ. ಅವನು ಹೇಳಿದ್ದು ಏನೆಂಬುದು ಹಲವರಿಗೆ ಅರ್ಥವಾಗಲಿಲ್ಲ. ಅರ್ಥಮಾಡಿಕೊಂಡ ಹಲವರಿಗೆ ಅದರಂತೆ ನಡೆಯಲು ಇಷ್ಟವಾಗಲಿಲ್ಲ.

ಸುಮ್ಮನೆ ಬಿಡುವನೆ ಅಧಿಕಾರಿ. ಕೈಯಲ್ಲಿದ್ದ ಚಾವಟಿಯನ್ನು ಒಂದು ಸಾರಿ ಬಾರಿಸಿದ. ತನ್ನ ಮಾತನ್ನು ಲಕ್ಷಿಸದೆ ಹೋದವರ ಮುಂಪಿಂಡನಿಗೆ ಚಾವಟಿಯಿಂದ ಎರಡು ಬಿಗಿದ. ಎಲ್ಲರೂ ಹೆದರಿ ತಮ್ಮ ಎದುರಿನಲ್ಲಿದ್ದ ಹೆಣ್ಣಾಳುಗಳ ಕೈಗಳನ್ನು ಹಿಡಿದುಕೊಂಡರು.

ಜೋಡಿಜೋಡಿಯಾಗಿ ಅವರು ತಮ್ಮ ವಾಸಸ್ಥಳಕ್ಕೆ ಹೋಗಬೇಕೆಂದು ಆಜ್ಞಾಪಿಸಿದನು.

೪

ಒಕ್ಕಲಿದ್ದ ಮೈದಾನವನ್ನು ಸೇರುವ ಹೊತ್ತಿಗೆ ಒಂದೇ ಜಗಳ. ಸೈನಿಕರಲ್ಲಲ್ಲ. ಅವರಿಗೆ ಸೇರಿದ ಹೆಂಡತಿಯರಲ್ಲಿ. ಅವರ ಭಾಷೆಯೋ ಗಂಡಸರಿಗೆ ತಿಳಿಯದು. ಜಗಳದ ಕಾರಣವೇ ಗೊತ್ತಿಲ್ಲದೆ ಅವರನ್ನು ಬಿಡಿಸಿ ಮಧ್ಯಸ್ಥ ಮಾಡುವುದು ಹೇಗೆ? ಅದೂ ಅಲ್ಲದೆ ಅವರೆಲ್ಲ ಗೋಷ. ಗಂಡಸರು ಅವರೊಡನೆ ಕಲೆತು ಸಮಾಧಾನ ಮಾಡಲು ಸಹಿತ ಆಗದು. ಹಾಗೆ ಮಾಡಿದರೆ ತಮ್ಮ ಮತದ ಸಂಪ್ರದಾಯಕ್ಕೆ ಭಂಗ ಬಂತೆಂದು ಕಾಜಿಗಳೆಲ್ಲಿ ತೊಂದರೆ ಮಾಡುವರೊ ಎಂಬ ಭಯ.

ಸ್ವಲ್ಪ ಸ್ವಲ್ಪವಾಗಿ ಕಾರಣವು ಹೊರಬಿತ್ತು. ಕವಾತು ಮೈದಾನದಿಂದ ಅವರ ವಾಸಸ್ಥಳಕ್ಕೆ ಬರುವ ದಾರಿಯಲ್ಲಿ ಅಂಗಡಿ ಬೀದಿ ಮತ್ತು

ಸಂತೆಯ ಚೌಕ. ಅಲ್ಲಿ ಗುಂಪು ಬಹಳ. ಜೋಡಿಗಳು ಕೈ ಕೈ ಹಿಡಿದು ಕೊಂಡು ಗುಂಪಿನಲ್ಲಿ ಒಡಲು ಸಾಧ್ಯವೆ? ಜನರ ಗುಂಪಿಗೆ ಸಿಕ್ಕಿಹೋದ ಜೋಡಿಗಳು ಬಿಡಿಬಿಡಿಯಾದವು.

ಎರಡು ಕಡೆಯವರಿಗೂ ಭಯ. ತಮ್ಮನ್ನೇನಾದರೂ ಸೈನ್ಯಾಧಿ ಕಾರಿಗಳು ನೋಡಿ "ಪತಕ್ಕೆ ಕೈ ಬಿಟ್ಟೆ" ಎಂದು ಕೋಪಿಸುವರೊ ಎಂಬ ಅಂಜಿಕೆ. ಆದುದರಿಂದ ಅವರು ಗುಂಪಿನಿಂದ ಹೊರಬೀಳುತ್ತಲೇ ತಮ್ಮ ಕೈಗೆ ಸಿಕ್ಕಿದ ಹೆಣ್ಣಾಳ ಕೈಯನ್ನು ಹಿಡಿದುಕೊಂಡರು. ಹಿಂದೆ ತನಗೆ ಸಿಕ್ಕ ಹೆಣ್ಣಾರೆಂಬುದು ಅವರಿಗೆ ತಿಳಿಯದು.

ಹೇಗೆ ತಿಳಿಯುವುದು. ಒಬ್ಬರನ್ನೊಬ್ಬರು ನೋಡಿದುದೇ ಇಲ್ಲ. ಅವರ ಮನಸ್ಸು ಇದ್ದ ಸ್ಥಿತಿಯಲ್ಲಿ, ಆ ಒಂದು ಕ್ಷಣದಲ್ಲಿ ಮತ್ತೊಬ್ಬ ರನ್ನು ಹೇಗೆ ತಾನೇ ಚೆನ್ನಾಗಿ ನೋಡಲಿಕ್ಕಾಗುತ್ತೆ? ಸೈನಿಕರೆಲ್ಲರಿಗೂ ಬುರಕಿ ಹಾಕಿಕೊಂಡಿದ್ದ ರೂಪಗಳೆಲ್ಲವೂ ಒಂದೇ ಬಗೆಯಾಗಿ ಕಂಡಿತು. ಹಾಗೆಯೇ ಹೆಂಗಸರಿಗೂ ಐರೋಪ್ಯರಾದ ಸೈನಿಕರ ಮುಖಛಾಯೆ ಯನ್ನು ಗುರುತು ಇಟ್ಟುಕೊಳ್ಳಲು ಆಗಲಿಲ್ಲ. ವಾಸಸ್ಥಳವನ್ನು ಸೇರಿ ಸ್ವಲ್ಪ ಸಮಾಧಾನವಾದನಂತರವೇ ಅವರನ್ನು ನೋಡಿದರು ಹೆಂಗಸರು.

"ನನಗೆ ಸಿಕ್ಕಿದ್ದ ಗಂಡಸು ಸುಂದರನಾಗಿದ್ದಾನೆ ಎಂದು ನೀನು ಅವನನ್ನು ಎಳೆದುಕೊಂಡೆಯಾ?" ಎಂದಳೊಬ್ಬಳು ಮತ್ತೊಬ್ಬಳನ್ನು ನೋಡಿ.

ಅವಳು ಸುಮ್ಮನೆ ಇರಲಿಲ್ಲ. "ಹೌದು, ಇದನ್ನೂ ಹೇಳುವೆ; ಇನ್ನೂ ಹೇಳುವೆ. ನೀನು ಮಾಡುವುದನ್ನೆಲ್ಲ ಮಾಡಿಬಿಟ್ಟು ಇತರರನ್ನು ಅನ್ನದೆ ಇರುವೆಯಾ? ಈ ಮಂಗದ ಮೋರೆಯನ್ನೇನು ನಾನು ಕಂಡು ಆಸೆಪಟ್ಟದ್ದು. ಇರುವವರಲ್ಲಿ ಸುಂದರನಾದವನನ್ನು ಕಟ್ಟಿಕೊಂಡದ್ದು ನೀನೋ, ನಾನೋ?" ಎಂದು ಬಿಸಿಬಿಸಿಯಾಗಿಯೇ ಉತ್ತರಕೊಟ್ಟಳು.

ಅದರಮೇಲೆ ಕೇಳಬೇಕೇ ಜಗಳದ ವೇಗವನ್ನು? ಸೈನಿಕರು ಈ ತಮಾಷೆಯನ್ನು ನೋಡಿಕೊಂಡೇ ನಿಲ್ಲಬೇಕಾಯಿತು.

ಇಷ್ಟು ವೈಭವಗಳ ನಡುವೆ ಜೇಮ್ಸ್ ಸ್ಕರ್ರಿಗೂ ಒಬ್ಬ ಹೆಂಡತಿ

ಸಿಕ್ಕಿದಳು. ಅವಳು ಆರ್ಕಾಟ್ ಪ್ರದೇಶಕ್ಕೆ ಸೇರಿದವಳು. ಹೆಂಗಸರೆಲ್ಲರೂ ಮೈಸೂರಿಗೆ ಸೇರಿದವರಲ್ಲ. ಹೈದರನೂ ಟಿಪ್ಪುವೂ ನಾಡಿನ ಹಲವು ಭಾಗಗಳನ್ನು ಹೊಕ್ಕು ಅವುಗಳನ್ನು ಜಯಿಸಿದಾಗ ಹಲವು ಮಂದಿ ಸೆರೆ ಸಿಕ್ಕಿದರು. ಅವರೆಲ್ಲರನ್ನೂ ಮೈಸೂರಿಗೆ ಕರೆತಂದ ಹೈದರ್. ಹಾಗೆ ಬಂದವರಲ್ಲಿ ಮದುವೆಗೆ ಯೋಗ್ಯರಾಗಿದ್ದ ಸಣ್ಣವಯಸ್ಸಿನ ಹೆಣ್ಣು ಗಳು ಇವರು.

ಸ್ಕರ್ರಿಗೆ ಅವಳಲ್ಲಿ ಎರಡು ಮಕ್ಕಳಾದವು. ಮೊದಲಿನ ಮಗು ಸತ್ತು ಹೋಯಿತು. ಎರಡನೆಯದು ಗಂಡುಮಗು. ಅದು ಬದುಕಿತ್ತು.

೫

ಜೇಮ್ಸ್ ಸ್ಕರ್ರಿ ನಮ್ಮ ದೇಶದವನಲ್ಲ. ಆಂಗ್ಲೇಯನು. ಡೆವಾನ್ ಷೈರ್ ಎಂಬ ಪ್ರದೇಶಕ್ಕೆ ಸೇರಿದವನು. ನಾಡು ಕಡಲು ದಾಟಿ ಹಣ ವನ್ನು ಗಳಿಸಲು ಹೊರಟ ಐರೋಪ್ಯನೊಬ್ಬನ ಮಗ. ಅವನು ಹುಟ್ಟಿದ್ದೇ ಹಡಗಿನಲ್ಲಿ. ಎಳನೇ ವಯಸ್ಸಿನಲ್ಲೇ ಹಡಗಿನಲ್ಲಿ ಕೆಲಸಕ್ಕೆ ಸೇರಿ ಪ್ರಪಂಚದ ಹಲವು ಭಾಗಗಳನ್ನು ಸುತ್ತಿ ನೋಡಿದನು. ವಿಧಿವಶ ದಿಂದ ತನ್ನ ಹದಿನೈದನೆಯ ವಯಸ್ಸಿನಲ್ಲಿ, ಕ್ರಿ. ಶ. ೧೭೮೦ನೆಯ ವರ್ಷ ದಲ್ಲಿ ಅವನು ತರಂಗಂಬಾಡಿಯ ಬಳಿ ಫ್ರೆಂಚರ ಕೈಗೆ ಸೆರೆ ಸಿಕ್ಕಿದ. ಅವ ನನ್ನೂ ಅವನ ಹಾಗೆ ಸೆರೆ ಬಿದ್ದಿದ್ದ ಮತ್ತೂ ಐದಾರು ಜನರನ್ನೂ ಚಿದಂಬರದ ಬಳಿ ಬಿಡಾರ ಮಾಡಿದ್ದ ಹೈದರನ ಬಳಿ ಬಿಟ್ಟುಬಿಟ್ಟರು ಫ್ರೆಂಚರು. ಹೈದರನು ಅವರನ್ನು ಶ್ರೀರಂಗಪಟ್ಟಣಕ್ಕೆ ಕರೆದುಕೊಂಡು ಹೋಗಿ ಊರಿನ ಪಕ್ಕದಲ್ಲಿ ಒಂದು ದೊಡ್ಡ ಮೈದಾನದಲ್ಲಿ ಗುಡಿಸಿಲು ಗಳನ್ನು ಕಟ್ಟಿಸಿ ಬಿಕ್ಕಳಿಡಿಸಿದನು. ಅವರನ್ನೂ ಅವರಂತಿರುವ ಮತ್ತೆ ಹಲವರನ್ನೂ ತಂದು ಬೇರೆ ಒಂದು ಪಡೆಯನ್ನು ನಿರ್ಮಿಸಿದನು. ಈ ಪಡೆ ಯನ್ನು ತನ್ನ ಸ್ವಂತ ದಳಬಲಕ್ಕೆ ಸೇರಿಸಿದ್ದಾಯಿತು.

ಸ್ವೇಚ್ಛೆಯಾಗಿ ಅಲೆಯುತ್ತಿದ್ದ ಅವರಿಗೆ ಸೈನ್ಯದ ಶಿಸ್ತು ನಿರ್ಬಂಧ ಗಳನ್ನು ಪಾಲಿಸಲು ಆಗಲಿಲ್ಲ. ನಿರ್ಬಂಧವೂ ಕಡುದಾಗಿತ್ತು. ನನುಯ

ಸಿಕ್ಕಿದರೆ ಅವರು ತಪ್ಪಿಸಿಕೊಂಡು ಓಡಿಹೋಗುವರೆಂದೇ ಬಗೆದ ಹೈದರ್. ಆದುದರಿಂದ ಅವರಿಗೆ ಕಾವಲು ಅಧಿಕವಾಗಿಯೇ ಇತ್ತು.

"ಇವರು ಈ ದೇಶದಲ್ಲೇ ಎಂದೆಂದಿಗೂ ತಂಗಬೇಕು. ನಮ್ಮ ಜಯಕ್ಕಾಗಿ ಹೋರಾಡಬೇಕು. ತಮ್ಮ ತಾಯ್ನಾಡಿಗೆ ಹಿಂತಿರುಗಬೇಕೆಂಬ ಚಪಲವನ್ನು ಸಂಪೂರ್ಣವಾಗಿ ಬಿಡಿಸಬೇಕು. ಅದಕ್ಕೆ ತಕ್ಕ ಉಪಾಯವನ್ನು ಹುಡುಕಬೇಕು" ಎಂದೆಲ್ಲಾ ಯೋಚಿಸಿದನು ಹೈದರನು.

ಅವರೊ, ಇದಕ್ಕೆ ವ್ಯತಿರೇಕವಾಗಿ ವಿಚಾರ ಮಾಡಿದ್ದರು. ಸೆರೆಮನೆಯಂತಿರುವ ಆ ಬಾಳಿನಿಂದ ಯಾವಾಗ ತಪ್ಪಿಸಿಕೊಂಡು ಹೋಗುವೆವೊ ಎಂದು ಕಾದಿದ್ದರು. ಆ ಗುಂಪಿನಲ್ಲಿ ಯುವಕರು, ವಯಸ್ಸಾದವರು, ನಡುವಯಸ್ಸಿನವರು ಇಂಥವರೆಲ್ಲ ಇದ್ದರು. ಅವರಲ್ಲಿ ಹಲವರಿಗೆ ದೇಶಾಂತರದಲ್ಲಿಯೊ ಇಂಗ್ಲೆಂಡಿನಲ್ಲಿಯೊ ಹೆಂಡತಿ ಮಕ್ಕಳು ಇದ್ದರು. ಮತ್ತೆ ಹಲವರಿಗೆ ತಾಯಿತಂದೆ ಇದ್ದರು. ಅವರೆಲ್ಲರನ್ನೂ ಅವರು ಮರೆಯಲಾಗುತ್ತದೆಯೆ?

ಹೈದರನು ಅವರನ್ನು ತನ್ನ ನಾಡಿನವರಾಗಿ ಬದಲಾಯಿಸಬಯಸಿದನು. ಅವರನ್ನೆಲ್ಲ ಮುಸಲ್ಮಾನರನ್ನಾಗಿ ಮಾಡಿ ಒಬ್ಬೊಬ್ಬರಿಗೂ ಮಹಮದೀಯ ಹೆಸರನ್ನು ಕೊಟ್ಟನು. ಅನಂತರ ಅವರನ್ನು ಆ ಹೆಸರುಗಳಿಂದಲೇ ಕರೆಯಬೇಕೆಂದೂ ಹಳೆಯ ಹೆಸರುಗಳನ್ನು ಮರೆಯಬೇಕೆಂದೂ ಆಜ್ಞಾಪಿಸಿದನು. ಇಷ್ಟೇನೇ. ಅವರು ಇಂಗ್ಲೀಷಿನಲ್ಲಿ ಮಾತನಾಡಕೂಡದು, ಹಿಂದೂಸ್ತಾನಿಯನ್ನೊ ಕನ್ನಡವನ್ನೊ ಕಲಿತು ಅದರಲ್ಲಿ ಮಾತನಾಡಬೇಕು ಎಂದು ತೀರ್ಮಾನಿಸಿದನು.

ಅವರಿಗೆ ಇದು ಸರಿಯೆನಿಸಲಿಲ್ಲ. ಒಬ್ಬೊಬ್ಬರೇ ಇರುವಾಗ ಹಳೆಯ ಹೆಸರುಗಳನ್ನೇ ಹಿಡಿದು ಕೂಗುವರು; ಇಂಗ್ಲೀಷಿನಲ್ಲಿಯೇ ಮಾತನಾಡುವರು. ಆದರೆ ಬೇರೆ ಯಾರನ್ನಾದರೂ ಕಂಡರೆ ಕಣ್ಣು ಹೊರಳಿಸಿ ಹೊಸ ಹೆಸರಿನಿಂದಲೇ ಕೂಗಿ ಕನ್ನಡದಲ್ಲೋ ಹಿಂದೂಸ್ತಾನಿಯಲ್ಲೋ ಒದರಾಡುವರು. ನೋಡುವವರಿಗೆ ಅದು ತಮಾಷೆಯಾಗಿತ್ತು.

೬

'ಶಂಸುದ್ದೀನ್ ಖಾನ್!'

ಗುಡುಗಿನಂತೆ ಆರ್ಭಟಿಸಿತು ಆ ಧ್ವನಿ.

ಹೆಂಡತಿಯನ್ನೂ ಮಗುವನ್ನೂ ಪುನಃ ಪುನಃ ನೋಡುತ್ತಿದ್ದ ಸ್ಕರ್‌ಡ್ರಿಯನ್ನು ಎಳೆದು ಹಾಕಿತು ಅದು.

ಇನ್ನು ನಿಧಾನಮಾಡಲಾಗದು. ಪಡೆಯು ಹೊರಡಲಿದೆ. ಎಲ್ಲರೂ ಬಂದುಬಿಟ್ಟಿದ್ದಾರೆ. ಅವನೊಬ್ಬನೇ ಬಾಕಿ. ಅದಕ್ಕಾಗಿಯೇ ಕರೆಯುತ್ತಿದ್ದಾನೆ ಅಧಿಕಾರಿ. ಕೂಡಲೆ ಹೊರಡಬೇಕೆಂಬುದು ಅವನಿಗೆ ಗೊತ್ತು.

ಪಡೆ ಹೊರಟರೇನು? ಯಮಪುರಕ್ಕೆ ಹೋಗುತ್ತದೇನು? ಪುನಃ ಬರುವುದಿಲ್ಲೇನು? ಇದೇ ಏನು, ಅವನು ಮೊದಲು ಹೊರಗೆ ಹೋಗುತ್ತಿರುವುದು?

ಪಡೆ ಯುದ್ಧಕ್ಕೆ ಹೋಗುವುದು. ಮೈಸೂರಿನ ಮೇಲೆ ದಂಡೆತ್ತಿ ಬಂದಿದ್ದ ಮಹಾರಾಷ್ಟ್ರರೊಡನೆ ಹೋರಾಡಬೇಕಾಗಿದೆ. ಐರೋಪ್ಯ ವೀರರಾದ ಅವರು ಯುದ್ಧದಲ್ಲಿ ಮೊದಲ ಬಲಿಗೆ ಹೋಗಬೇಕಾದ್ದಿಲ್ಲ. ಹಿಂದೆ ನಿಂತು ಯುದ್ಧ ನಡೆಸಬೇಕವರು.

ಐರೋಪ್ಯ ವೀರರ ಆವಶ್ಯಕತೆಯನ್ನು ಚೆನ್ನಾಗಿ ಬಲ್ಲ ಹೈದರ್. ಇಲ್ಲವಾದರೆ ವಿಪರೀತ ಹಣ ವೆಚ್ಚಮಾಡಿ ಅವರನ್ನು ಹೀಗೇಕೆ ಕಾಪಾಡುತ್ತಿದ್ದ? ತನ್ನೊಡನೆ ಯುದ್ಧಮಾಡುತ್ತಿದ್ದ ಆಂಗ್ಲೇಯರಿಗೆ ಸಮನಾಗಿ ಯುದ್ಧಮಾಡಲು ಐರೋಪ್ಯ ಸೈನ್ಯವೇ ಒಳ್ಳೆಯದು ಎಂಬುದು ಅವನಿಗೆ ಗೊತ್ತು.

ಸ್ಕರ್‌ಡ್ರಿಯ ಮನಸ್ಸು ಕದಡಿದ್ದಕ್ಕೆ ಕಾರಣ ಬೇರೆ. ಹೊರಗಡೆ ಎಲ್ಲಾದರೂ ಬಿಡಾರ ಹಾಕಿದಾಗ ಸಮಯ ನೋಡಿ ತಪ್ಪಿಸಿಕೊಂಡು ಹೋಗಬೇಕೆಂದು ನಿಶ್ಚಯಿಸಿದ್ದರು ಐದಾರು ಜನ. ಅವರಲ್ಲಿ ಸ್ಕರ್‌ಡ್ರಿಯೂ ಒಬ್ಬ. ಅದೇ ಅವನ ಮನಸ್ಸನ್ನು ಅಡಿಯಾಡಿಸಿತು.

ಮೊದಲಲ್ಲಿ ದ್ವೇಷಿಸುತ್ತಿದ್ದ ತನ್ನ ಕರಿಯ ಹೆಂಡತಿಯನ್ನು ಬಿಟ್ಟು

ಆಗಲಿಲ್ಲ. ಈಗ ಅವನಿಗೆ ಮನಸ್ಸು ಬರಲಿಲ್ಲ. ಸಲಿಗೆ ಬೆಳೆಯುವುದಕ್ಕೆ ಮೊದಲು ಇಬ್ಬರಿಗೂ ಮಧ್ಯೆ ಮಲೆಗೂ ಮಡುಗೂ ಇದ್ದ ವ್ಯತ್ಯಾಸ. ಮನಸ್ಸಿಲ್ಲದೆ ಬಲಾತ್ಕಾರದಿಂದಲೇ ಅವಳೊಡನೆ ಬಾಳಿದ. ಆದರೆ ಅವಳ ಗುಣವು ಅವನನ್ನು ಮೆಚ್ಚಿಸಿತು. ಪ್ರೇಮವು ಬೆಳೆಯಿತು. ಅದರ ಫಲವಾಗಿ ಮಕ್ಕಳೂ ಹುಟ್ಟಿದವು. ಹೇಗಾದರೂ ಮಾಡಿ ಅವಳನ್ನು ತನ್ನ ಜೊತೆಯಲ್ಲಿ ಇಂಗ್ಲೆಂಡಿಗೆ ಕರೆದುಕೊಂಡು ಹೋಗಬೇಕೆಂದು ಇಷ್ಟಪಟ್ಟ. ಅವಳು ಬರುವಳೇ ಎಂಬ ಚಿಂತೆ ಮಧ್ಯೆ ಮಧ್ಯೆ ಬರುತ್ತಿತ್ತು.

ಈ ಚಿಂತೆಯನ್ನು ಅಡಗಿಸಲು ಆಗಲಿಲ್ಲ ಅವನಿಂದ. ಕೊನೆಗೆ ಅವಳನ್ನೂ ಮಗುವನ್ನೂ ಅಪ್ಪಿಕೊಂಡು ಮುತ್ತಿಡಲು ಇಷ್ಟಪಟ್ಟನವನು.

ಹಾಗೆ ಮಾಡುವುದಕ್ಕೂ ಭಯ. ಏನಾದರೂ ಹೇಳುವುದಕ್ಕೂ ಭಯ. ಮಾತು ಬಯಲಾಗಿ ಸಿಕ್ಕಿಬಿದ್ದರೆ ಎಲ್ಲಾ ವ್ಯರ್ಥವಾಗುವುದಲ್ಲ ಎಂಬುದು. ತಾನು ಸಿಕ್ಕಿಹೋಗುವುದಲ್ಲದೆ ಮತ್ತವರನ್ನೂ ತೋರಿಸಿ ಕೊಟ್ಟಹಾಗಾಗುತ್ತಲ್ಲ ಎಂಬ ಚಿಂತೆ.

ಬದಲು ಮಾತನಾಡದೆ ಹೊರಗೆ ಹೋದ. ಅನಂತರ ಅವನು ಅವಳನ್ನು ನೋಡಲಿಲ್ಲ.

* * * *

ಪಡೆ ಹೊರಟಿತು. ಸ್ಕರ್ರಿಯೂ ಮತ್ತು ಇತರ ನಾಲ್ಕು ಮಂದಿಯೂ ಮೊದಲೇ ಏರ್ಪಾಡು ಮಾಡಿದ್ದಂತೆ ಮೂರನೇ ದಿನವೇ ತಪ್ಪಿಸಿಕೊಂಡು ಓಡಿದರು. ರಾತ್ರಿಯಲ್ಲಲ್ಲ. ಆಗ ಜಡಾರದಿಂದ ಯಾರೂ ಹೊರಗೆ ಹೊರಡಲು ಆಗುತ್ತಿರಲಿಲ್ಲ. ಕಾವಲು ಬಲವಾಗಿತ್ತು. ಅವರು ತಪ್ಪಿಸಿಕೊಂಡು ಹೋದದ್ದು ಮಧ್ಯ ಹಗಲಲ್ಲಿ. ಬಿಸಿಲಿನ ಝಳವನ್ನು ತಾಳಲಾರದೆ ಅಧಿಕಾರಿಗಳೂ ಸೈನಿಕರೂ ವಿಶ್ರಾಂತಿ ತೆಗೆದುಕೊಳ್ಳುವ ಸಮಯ. ಕಾವಲುಗಾರನು ಸ್ವಲ್ಪ ಮೈಮರೆತಿದ್ದ. ಆದರೂ ಹಗಲಿನಲ್ಲಿ ಹೊರಗೆ ಹೊರಡುವವರಿಗೆ ಅಷ್ಟು ನಿರ್ಬಂಧವಿಲ್ಲವಲ್ಲವೆ?

ಬೆಟ್ಟಗುಡ್ಡಗಳಲ್ಲೂ, ಪೊದೆಗಳಲ್ಲೂ ತೂರಿಕೊಂಡು ಕೊಂಚ ಕೊಂಚವಾಗಿ ದಾರಿನಡೆದರು. ಎರಡು ದಿನಗಳು ಕಳೆದವು. ಸ್ಕರ್ರಿಗೆ

ಹೆಂಡತಿಯನ್ನೂ ಮಗುವನ್ನೂ ಕುರಿತು ಹಲುಬು ಉಂಟಾಯಿತು. ಅವರನ್ನು ಬಿಟ್ಟು ಅಗಲಿದುದನ್ನು ತಾಳಲಾರದೆ ಹಿಂತಿರುಗುವುದು ಎಂದೇ ಎಣಿಸಿದ. ಅದು ಸಾಧ್ಯವೊ? ಇದು ಇನ್ನೂ ಕಷ್ಟಸಾಧ್ಯವೆಂದು ಮತ್ತ್ರವರು ತಿಳಿಹೇಳಿದರು.

ಮೆಲ್ಲಮೆಲ್ಲನೆ ನಡೆದು ಮಹಾರಾಷ್ಟ್ರರ ಕೈಗೆ ಸಿಕ್ಕಿ ಕೊನೆಗೆ ಮದರಾಸನ್ನು ಸೇರಿದನು. ಅಲ್ಲಿಂದ ಹಡಗು ಹತ್ತಿ ಕ್ರಿ. ಶ. ೧೭೯೩ನೆಯ ವರ್ಷದಲ್ಲಿ ಲಂಡನ್ ನಗರವನ್ನು ಸೇರಿದನು.

೭

ಇಂಗ್ಲೆಂಡಿಗೆ ಬಂದನಂತರ ಅವನು ಸುಮ್ಮನಿರಲಿಲ್ಲ. ಹಿಂದೂಸ್ತಾನಕ್ಕೆ ಹೊರಡುವ ಪ್ರತಿಯೊಂದು ಹಡಗಿನಲ್ಲೂ ಅವಳಿಗೆ ಕಾಗದ ಬರೆದು ಕಳುಹಿಸಿದ. ತನಗೆ ತಿಳಿದವರು ಹಿಂದೂಸ್ತಾನಕ್ಕೆ ಹೋಗುವುದಾಗಿದ್ದರೆ ಅವರನ್ನು ಸ್ವತಃ ಕಂಡು, ಕಾಗದವನ್ನು ಕೊಟ್ಟು ಸಮಾಚಾರವನ್ನು ಹೇಳಿಬರುತ್ತಿದ್ದ. ತಮಿಳುನಾಡಿಗೆ ಹೋಗುವವರ ಕೈಲಿ ಅವಳನ್ನು ಹೇಗಾದರೂ ಹುಡುಕಿ ಹಡಗು ಹತ್ತಿಸಿ ತನ್ನ ಬಳಿಗೆ ಕಳುಹಿಸಬೇಕೆಂದು ಬೇಡಿಕೊಳ್ಳುತ್ತಿದ್ದ.

ಅವಳನ್ನು ಹೇಗಾದರೂ ತನ್ನ ಬಳಿಗೆ ಕರೆಸಿಕೊಳ್ಳಬೇಕೆಂದು ಭಗೀರಥ ಪ್ರಯತ್ನ ನಡೆಸಿದನು. ಅವಳಿಲ್ಲದಿದ್ದರೂ ಆ ಮಗುವನ್ನಾದರೂ ಕಾಣಬಹುದಲ್ಲ ಎಂದು ಪ್ರಯತ್ನಿಸಿದ. ತಾನು ಬರೆದ ಕಾಗದಗಳೂ, ಹೇಳಿ ಕಳುಹಿಸಿದ ಸಮಾಚಾರಗಳೂ ಅವಳಿಗೆ ಮುಟ್ಟಿತೇ ಎಂಬುದನ್ನು ತಿಳಿಯಲು ಸಹಿತ ಅವನಿಗೆ ಶಕ್ಯವಾಗಲಿಲ್ಲ.

ತನ್ನ ಇಪ್ಪತ್ತೆಂಟನೆಯ ವಯಸ್ಸಿನಲ್ಲಿ ಇಗ್ಲೆಂಡಿಗೆ ಹಿಂತಿರುಗಿ ಬಂದ ಅವನು ಅದರನಂತರ ಇಪ್ಪತ್ತೊಂಬತ್ತು ವರ್ಷ ಬದುಕಿದ್ದ. ಹೌದು. ಅವನು ತನ್ನ ಬದುಕಿನ ಕೊನೆಯ ಅಧ್ಯಾಯದ ಅರ್ಧವನ್ನು 'ನಾನು ಅವಳನ್ನು ಮತ್ತೆ ಕಾಣುವೆನೆ' ಎಂಬ ಚಿಂತೆಯಲ್ಲಿಯೇ ಕಳೆದ. ಅವಳನ್ನು

ಕುರಿತು ನೆನಪುಂಟಾದಾಗಲೆಲ್ಲಾ ಅವನಿಗೆ ಚಾಳಿನಲ್ಲಿ ಬೇಸರ ತಲೆದೋರು ತ್ತಿತ್ತು. ಎಲ್ಲವೂ ಶೂನ್ಯವಾಗಿ ಕಾಣುತ್ತಿತ್ತು. ತನ್ನ ಕಣ್ಣೆದುರಿಗೆ ನಡೆಯುತ್ತಿದ್ದುದನ್ನೂ ಅವನು ಸರಿಯಾಗಿ ನೋಡುತ್ತಿರಲಿಲ್ಲ. ಉದ್ದ ವಾದ ನಿಟ್ಟುಸಿರನ್ನು ಯಾವಾಗಲೂ ಬಿಡುತ್ತಲೇ ಇರುತ್ತಿದ್ದ. ಹಲವು ವರ್ಷಗಳ ಹಿಂದೆ ಹಿಂದೂಸ್ತಾನದಲ್ಲಿ ಬೆಳೆದ ಆ ಪ್ರೇಮದ ಪ್ರಸಂಗವನ್ನು ನೆನೆನೆನೆದು ಅವನ ಮನವು ಮರುಗಿತು. ಅವನು ಹಲುಬಿದನು. ಆ ಹಲುಬು ತೀರಲೇ ಇಲ್ಲ.



# ತ್ಯಾಗ

**ಶ್ರೀಮಾನ್ ಎಸ್. ವೈದ್ಯಲಿಂಗಂರವರು** ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆಯುತ್ತಿರುತ್ತಾರೆ; ಹಲವು ಕತೆಗಳನ್ನು ಬರೆದಿದಾರೆ. ಈಗ ಅವರು 'ಸಿಲೋನ್ ಸ್ಟೇಟ್ ಕೌನ್ಸಿಲ್' ಅಂದರೆ ಸಿಲೋನಿನ ಶಾಸನ ಸಭೆಯ ಸದಸ್ಯರು. ಸಿಲೋನಿನಲ್ಲಿಯೇ ಹುಟ್ಟಿ, ಅಲ್ಲಿಯೇ ವಿದ್ಯಾಭ್ಯಾಸವೂ ನಡೆದುದರಿಂದ ಅವರಿಗೆ 'ಸಿಲೋನಿನ ಪ್ರಜೆ' ಎನಿಸಿಕೊಳ್ಳುವ ಹಕ್ಕು ಲಭಿಸಿತು. ಇವರ ಪೂರ್ವಿಕರು ತಿರುಚನಾಪಳ್ಳಿ ಪ್ರಾಂತ್ಯದಿಂದ ಹೋಗಿ ಸಿಂಹಳದಲ್ಲಿ ನೆಲಸಿದರು.

ಅನೂರಾಧಾಪುರದಲ್ಲಿ ರಾಜ್ಯವಾಳಿದ ತಮಿಳು ಅರಸನಾದ ಎಲಾಲನೆಂಬುವನನ್ನು ಕೊಂದು ಸಿಂಹಳರಾಜ್ಯವನ್ನು ಸ್ಥಾಪಿಸಿದ ದುಷ್ಟ ಕೈಮುನು ಎಂಬ ಅರಸು ರಾಜ್ಯಭಾರಮಾಡಿದ ಕಾಲ ಕ್ರಿ. ಪೂ. ೩ನೆಯ ಶತಮಾನ. ಆ ಕಾಲದಲ್ಲಿ ಲಂಕಾದ್ವೀಪವು ಬಹಳ ಘನತೆಯನ್ನು ಪಡೆದಿತ್ತು. ಧರ್ಮಶಾಲೆಗಳೂ ವಿಹಾರಗಳೂ ಸೌಧಗಳೂ ಶಿಲ್ಪಸೌಂದರ್ಯವನ್ನು ಬೀರಿ ಕಂಗೊಳಿಸುತ್ತಿದ್ದುವು. ಹೊಲಗಳಲ್ಲಿ ಬೆಳೆಯುವ ಧಾನ್ಯ ಮುಂತಾದುವುಗಳನ್ನು ಹೇರಿಕೊಂಡು ಹಡಗುಗಳು ಬಂದರುಗಳಲ್ಲಿ ನಿಲ್ಲುತ್ತಿದ್ದುವು. ಬುದ್ಧಭಗವಾನನ ಧರ್ಮೋಪದೇಶವು ನಾಡೆಲ್ಲಾ ಹರಡಿರಲು, ಜಗಳಗಳೂ ಯುದ್ಧಗಳೂ ಮೆಲ್ಲಮೆಲ್ಲಗೆ ಮರೆಯಾಗಿ, ಕೀರ್ತಿಗೂ ಉನ್ನತಿಗೂ ಎಡೆಯಾದಂತಾಯಿತು.

ತಮಿಳು ಅರಸರನ್ನು ಸದೆಬಡಿದು ಸಿಂಹಳ ಪ್ರಭುತ್ವವನ್ನು ಮತ್ತೆ ನೆಲೆಗೊಳಿಸಿದ ಯಶಸ್ಸು ದುಷ್ಟ ಕೈಮುನುವಿಗೆ ಸಲ್ಲತಕ್ಕದ್ದೆ. ಆದರೆ ಅವನ ಹೆಸರು ಈಗಲೂ ಈ ಮಲೆನಾಡಿನಲ್ಲಿ ಪ್ರಸಿದ್ಧವಾಗಿರುವುದಕ್ಕೆ ಕಾರಣನು ಶಾಲಿ ಎಂಬ ಅವನ ಏಕಮಾತ್ರ ಪುತ್ರನು. ಶಾಲಿಯು ರಾಜಕುಮಾರರಿಗೆ ತಕ್ಕುದಾದ ಆನೆಸವಾರಿ, ಕುದುರೆಸವಾರಿ, ಧನುರ್ವಿದ್ಯೆ ಮೊದಲಾದುದರಲ್ಲಿ ನಿಪುಣನಾಗಿದ್ದನು. ಅವನು ಮಹಾವೀರನಾಗಿದ್ದುದಲ್ಲದೆ ಉತ್ತಮ ಕಲಾರಸಿಕನೂ ಆಗಿದ್ದನು. ಕಾಳಿದಾಸನ ಶಾಕುಂತಲದಲ್ಲೂ ಕುಮಾರಸಂಭವದಲ್ಲೂ ಅವನು ತನ್ನ ಹೃದಯವನ್ನೇ ಬಲಿಗೊಟ್ಟು ಆ ಕವಿಯರಸರು ನಿರ್ಮಿಸಿದ ವಿಲಕ್ಷಣ ಲೋಕಗಳಲ್ಲೇ ಸಂಚಾರಮಾಡುತ್ತಿದ್ದನು. ಅದರೊಂದಿಗೆ ಅವನ ಮನಸ್ಸು ಬುದ್ಧಭಗವಾನನ ಉಪದೇಶಗಳಲ್ಲೂ ಲೀನವಾಗಲು ಪಾಳಿ ಭಾಷೆಯಲ್ಲಿನ ಅನೇಕ ಶ್ಲೋಕಗಳು ಅವನ ಮನಸ್ಸಿನಲ್ಲಿ ನಾಟಿಹೋದವು.

ಕಾವ್ಯದ ತಿರುಳನ್ನು ಅನುಭವಿಸಿದ ಆ ರಾಜಕುಮಾರನಿಗೆ ನೀಲಾಕಾಶವೂ ವಿಶಾಲವಾಗಿ ಹರಡಿದ ಪಚ್ಚೆಪೈರುಗಳ ಹೊಲಗದ್ದೆಗಳೂ ಹೊಳೆಗಳೂ ಹೊರಳಿ ಹರಿಯುವ ಚಿಕ್ಕ ನದಿಗಳೂ ಮನಶ್ಶಾಂತಿಯನ್ನೂ ಆನಂದವನ್ನೂ ಕೊಡುತ್ತಲೇ ಇದ್ದಿರಬೇಕು. ಇಲ್ಲದಿದ್ದರೆ ಅವನೇಕೆ

ಪ್ರತಿದಿನವೂ ಬೆಳಗಿನ ಹೊತ್ತು ತನ್ನ ಅರಮನೆಗೆ ಬಹಳ ದೂರದಲ್ಲಿರುವ ಉದ್ಯಾನವನಕ್ಕೆ ಹೋಗಿ ಇಷ್ಟಬಂದಂತೆ ಹೊತ್ತುಕಳೆಯಬೇಕು? ಒಂದು ದಿನ ಆ ಉದ್ಯಾನವನದಲ್ಲಿ ಮನಬಂದಂತೆ ಅಡ್ಡಾಡುತ್ತಿರುವಾಗ ಎಲ್ಲಿಂದಲೋ ಒಂದು ಗೀತದ ಧ್ವನಿ ಗಾಳಿಯಲ್ಲಿ ತೇಲಿಕೊಂಡು ಬಂದಿತು. ಅವನು ಇದಕ್ಕೆ ಮೊದಲು ಈ ಬಗೆಯ ಅದ್ಭುತವಾದ ಮಧುರ ಧ್ವನಿಯನ್ನು ಕೇಳಿರಲಿಲ್ಲ. ಅದರ ಮಾಯಾಶಕ್ತಿಗೆ ಅವನು ಕಟ್ಟುಬಿದ್ದು ಆ ಗೀತವು ಬಂದ ದಿಕ್ಕಿಗೆ ಹೊರಟನು.

ಅಲ್ಲಿ ಅವನು ಕಂಡ ಆ ನೋಟಕ್ಕೆ ಏನು ಶಕ್ತಿ? ನಂದಿ ಆರಿ ಹೋಗಿದ್ದ ಆ ಒಳಜ್ವಾಲೆಯು ಹೀಗೇಕೆ ಹೊತ್ತಿಕೊಂಡು ಉರಿಯ ತೊಡಗಿತು? ಶಾಂತಿಯು ನೆಲೆಸಿದ್ದ ಅವನ ಹೃದಯದಲ್ಲಿ ಭಾವನಾ ಪ್ರವಾಹವು ಉಕ್ಕಿಬಂದು ಅವನನ್ನು ಎಲ್ಲಿಗೆ ಎಳೆದುಕೊಂಡು ಹೋಗು ವುದೊ! ಹೂಬಳ್ಳಿಗಳ ನಡುವೆ ತಾನೂ ಒಂದು ಬಳ್ಳಿಯಂತೆ ಸುತ್ತಿ ಕೊಂಡು, ಅಶೋಕಪುಷ್ಪಗಳನ್ನು ತನ್ನ ತಲೆಯಲ್ಲಿ ಮುಡಿದು ನಿಂತಿರುವ ಆ ಬಾಲೆಯಾರು?

ಶಾಲಿಯು ಕೈಲಿ ಮಾತನಾಡಲಾಗಲಿಲ್ಲ. ಅವನ ಹೃದಯ ವೀಣೆ ಯಲ್ಲಿ ಎಷ್ಟೊಂದು ವಿಚಿತ್ರವಾದ ಸ್ವರಗಳು ಎದ್ದವು! ಹಿಂದೆಂದೂ ಅನು ಭವಿಸದ ಒಂದು ಹೊಸ ಪ್ರೇಮ, ಮನೋದ್ವೇಗ ಮತ್ತು ಉಲ್ಲಾಸವು ಇಂದು ಹೇಗೆ ಹುಟ್ಟಿ ತಲೆದೋರಿದವೊ? ಅವಳ ಅದ್ಭುತ ಸೌಂದರ್ಯ ವನ್ನು ಸೂರೆಮಾಡಿ ಅವನು ಕಲ್ಲುಬಂಡೆಯಂಹಾಗೆ ನಿಂತ. ಒಂದು ನಿಮಿಷ, ಎರಡು ನಿಮಿಷ, ಹೀಗೆ ಹತ್ತು ನಿಮಿಷಗಳು ಕಳೆದವು. ಮನೆಗೆ ಹೊರ ಡಲು ಬುಗರಿಯಹಾಗೆ ತಿರುಗಿ ಹೊರಟಳವಳು. ಆದರೆ.... ಆ ಜೀವ ನದ ಆತುರ, ನಸುನಗೆ, ಮಧುರಧ್ವನಿ ಎಲ್ಲವೂ ಮಾಯವಾಗಿ ಮರೆ ಯಾದವು. ಯಾವುದೊ ಒಂದು ಕೌತುಕವು ವಿದ್ಯುತ್ಪ್ರವಾಹದಂತೆ ದೇಹ ದಾದ್ಯಂತ ಹರಿಯಲು ಅವಳ ಶಕ್ತಿಯಳಿದು ಗಾಳಿಗೆ ಸಿಕ್ಕಿ ಅಲುಗಾಡುವ ಹೂಬಳ್ಳಿಯೊಂದರಂತೆ ನಿಂತಳು. ರೆಕ್ಕೆ ಮುರಿದ ಗುಬ್ಬಚ್ಚಿಯ ಹಾಗೆ ಅವಳು ನಿಂತ ಆ ನೋಟ ರಾಜಕುಮಾರನಿಗೆ ಹೊಸ ಪ್ರಾಣವನ್ನು

ಕೊಟ್ಟಿತು. ಸ್ವಲ್ಪ ಧೈರ್ಯದಿಂದ ಮುಂದೆ ಬಂದು 'ವನದೇವತೆಯೇ, ನೀನು ಯಾರು? ನಿನ್ನ ವಾಸವೆಲ್ಲಿ? ನಿನ್ನ ಹೆಸರೇನು?' ಎಂದು ಕೇಳಿದನು.

ಅವಳು 'ಪ್ರಭೊ! ನಾನು ದೇವತೆಯೂ ಅಲ್ಲ, ಭೂತಗಣಕ್ಕೆ ಸೇರಿದವಳೂ ಅಲ್ಲ. ಅದೊ, ಆ ಹಳ್ಳಿಯಲ್ಲಿ ವಾಸಮಾಡುವ ಒಬ್ಬ ಬಡ ಹುಡುಗಿ. ನನ್ನನ್ನು ಅಶೋಕಮಾಲಾ ಎಂದು ಕರೆಯುತ್ತಾರೆ.' ಎಂದಳು.

'ಅಶೋಕಮಾಲಾ, ಅಶೋಕಮಾಲಾ! ಎಂದು ಮನಸ್ಸಿನಲ್ಲೇ ಜಪಿಸಿಕೊಂಡನು ಶಾಲಿ.

ಆಮೇಲೆ ಏನನ್ನೋ ಹೇಳಲು ಬಾಯಿ ತೆರೆದ. ಆದರೆ ಅವಳು ತನ್ನ ಗುಡಿಸಿಲಿಗೆ ಹೋಗಲು ತಿರುಗುವುದನ್ನು ಕಂಡೊಡನೆ ಅವನ ಮನಸ್ಸು 'ಡಿಕ್' ಎಂದಿತು. ಓಡಿಹೋಗಿ ಅವಳ ಮುಂದೆ ನಿಂತು, 'ಅಶೋಕ ಮಾಲಾ, ಏಕೆ ಇಷ್ಟು ಅವಸರವಾಗಿ ಹೋಗುವಿ? ನೀನು ಹೊರಡುವಾಗ ನನ್ನ ಪ್ರಾಣವನ್ನೇ ತೆಗೆದುಕೊಂಡು ಹೋಗುತ್ತಿರುವುದು ನಿನಗೆ ಗೊತ್ತೇನು? ನಿನ್ನನ್ನು ನೋಡುವ ಒಂದೊಂದು ಕ್ಷಣವೂ......' ಎಂದು ಹೇಳುತ್ತಿರುವಾಗ ಅವಳು ಅತ್ತಕಡೆ ತಿರುಗಿ ಪರಿಹಾಸ್ಯದ ಮಾತುಗಳನ್ನಾಡಲು ಇದು ಸಮಯವಲ್ಲ ನಾನು ನಿಮ್ಮ ಬಳಿ ನಿಂತು ಮಾತನಾಡುತ್ತಿರುವುದನ್ನು ನನ್ನ ಸಹೋದರನೇನಾದರೂ ಕಂಡರೆ ನಮ್ಮಿಬ್ಬರನ್ನೂ ಕೊಂದುಬಿಡುವನು. ನಾನು ಹೋಗುತ್ತೇನೆ' ಎಂದು ಹೇಳಿ ಹೋಗಲೆತ್ನಿಸಿದಳು.

'ಸ್ವಲ್ಪ ನಿಲ್ಲು, ನಿನ್ನ ಸಹೋದರನು ಬೇಡ, ನಿನ್ನ ಕಣ್ಣುಗಳೇ ಸಾಕು ನನ್ನನ್ನು ಕೊಲ್ಲಲಿಕ್ಕೆ. ನಾನು ಹೇಳುವುದನ್ನೆಲ್ಲ ಪರಿಹಾಸ್ಯವೆಂದು ಭಾವಿಸುವೆಯಾ? ಆಹಾ! ನಿನ್ನಲ್ಲಿ ನಾನಿಟ್ಟಿರುವ ಪ್ರಿತಿ ಎಂಥ ದೈವಿಕವಾದುದು! ಮುದುರಿದ್ದ ನನ್ನ ಹೃದಯಕಮಲವು ನಿನ್ನನ್ನು ಕಂಡೊಡನೆ ಅರಳಿಬಿಟ್ಟಿತು. ಎಷ್ಟೋ ಜನ ರೂಪವತಿಯರನ್ನು ನಾನು ನೋಡಿದ್ದೇನೆ. ನನ್ನ ಮನಸ್ಸು ಮರದ ದಿಮ್ಮಿಯ ಹಾಗೆ ಜೀವಕಳೆಯಿಲ್ಲದೆ ಇತ್ತು. ಆದರೆ ಇಂದು ಒಂದು ಹೊಸ ಪ್ರಪಂಚವು ನನ್ನನ್ನು

ಅನರಿಸಿವೆ. ಎಂದಿನಂತೆ ಇಂದೂ ಮಂದಮಾರುತನೂ ಬೀಸುತ್ತದೆ. ಆದರೆ ಅದರಲ್ಲಿ ನಾನು ತಗುಲಿದ ಮರವನ್ನು ಚಿಗುರಿಸುವ ಶಕ್ತಿಯನ್ನು ಕಂಡಿರಲಿಲ್ಲ. ಉದ್ಯಾನವನಕ್ಕೆ ಬರುವ ಕೋಗಿಲೆಯ ಗಾನವನ್ನು ನಾನು ಬಹಳ ಹೊತ್ತು ಕೇಳಿ ಆನಂದಿಸಿರುವೆನು. ಆದರೆ ಇಂದಿನಂತೆ ಅವುಗಳ ಮಧುರವಾಣಿಗೆ ಮನಸ್ಸು ಸೋತಿರಲಿಲ್ಲ. ನಿನ್ನನ್ನು ನೋಡುತ್ತಿರುವಾಗ ನನ್ನ ಮನಸ್ಸಿನಲ್ಲಿ ಆಗುವ ಸಂತೋಷಕ್ಕೆ ಎಲ್ಲೆಯೇ ಕಾಣುವುದಿಲ್ಲ, ಅಶೋಕಮಾಲಾ!' ಎಂದು ಹೇಳುತ್ತಿರುವಾಗ ಅವನ ಗಂಟಲು ಬಿಗಿಯಿತು; ನಾಲಿಗೆ ತಡೆದು ಬಂತು.

'ಪ್ರಭೊ! ಆದರೆ........'

'ಆದರೆ ಏನು?'

'ನಾನು ನಿಮ್ಮನ್ನು ವಿವಾಹವಾಗಬಯಸುವುದು, ಅದೊ, ಆ ಅಲ್ಪವಾದ ಕಾಡು ಹೂ ಸೂರ್ಯನನ್ನು ನೋಡಿ ಆಸೆಪಡುವಹಾಗೆ ಆಗುವುದು'

'ಹಾಗೇಕೆ ಹೇಳುತ್ತೀಯಾ? ಮತ್ತೆ ಹಾಗೆ ಹೇಳಬೇಡ. ನನ್ನ ಹೃದಯವು ಒಡೆದು ಹೋದೀತು.'

'ನೀವು ನನ್ನೊಡನೆ ಪ್ರೇಮದ ಮಾತುಗಳನ್ನಾಡುತ್ತಿದ್ದೀರಿ. ನಾನೊಬ್ಬ ನೀಚಕುಲದ ಹುಡುಗಿ!'

'ನೀಚಕುಲದ ಹುಡುಗಿ ಅಂದರೆ?'

'ಒಬ್ಬ ಚಂಡಾಲಿ'

ಶಾಲಿಯ ಎದೆಯಮೇಲೆ ಒಂದು ಕಲ್ಲುಬಂಡೆಯೇ ಬಂದು ಬಿದ್ದಂತಾಯಿತು. ಪಕ್ಕದಲ್ಲಿ ನಿಂತರೆ ಅವನ ಹೃದಯವು 'ಡಕ್, ಡಕ್' ಎಂದು ಹೊಡೆಯುವುದು ಸಹಿತ ಕೇಳಿಬರುತ್ತಿತ್ತು. 'ಅಶೋಕಮಾಲಾ! ನೀನೆ ಚಂಡಾಲಿ? ಎಂದಿಗೂ ಇಲ್ಲ! ಇಲ್ಲ!' ಎಂದು ಹುಚ್ಚುಹಿಡಿದವನ ಹಾಗೆ ಒದರಿದನು. ಅಶೋಕಮಾಲಾ ಭ್ರಮಿಸಿಹೋಗಿ ಒಂದು ಉಸಿರು

ಗೊಂಬೆಯಹಾಗೆ ನಿಂತಳು. ಶಾಲಿಯು ಒದರಿದ ಧ್ವನಿಯು ಮಾತ್ರ ಆ ಕಾಡಿನಲ್ಲೆಲ್ಲಾ ಹರಡಿ ಪ್ರತಿಧ್ವನಿಸಿತು.

ಹಲವು ಬಗೆಯ ಯೋಚನೆಗಳು ಅಲೆಯಹಿಂದೆ ಅಲೆಯಹಾಗೆ ಬಂದು ಶಾಲಿಯ ಹೃದಯಬಂಡೆಗೆ ಹೊಡೆದು ಚದುರಿದವು. ಮೇಲುಗಡೆ ಪರ್ವತದ ಶಿಖರದಲ್ಲಿ ರಾಜಭೋಗ, ಐಶ್ವರ್ಯ, ಕೀರ್ತಿ. ಕೆಳಗೆ ಕಣಿವೆಯ ಹಳ್ಳದಲ್ಲಿ ಬಳ್ಳಿಗಳ ನಡುವೆ ಬೆಳೆದ ಬಡ ಅಶೋಕಮಾಲಾ.

ಶಾಲಿಯ ಕಣ್ಣುಗಳು ಮಿನುಗಿದವು. ಅವನ ಮುಖದಲ್ಲಿ ಅದ್ಭುತವಾದ ಕಾಂತಿ ಪ್ರಕಾಶಿಸಿತು. ತ್ಯಾಗಪುರುಷರಲ್ಲಿ ಕಾಣುವ ಶಾಂತತೆಯು ಅವನ ಮುಖಕಮಲದಲ್ಲಿ ನೆಲಸಿತ್ತು. ನಿಷ್ಕಳಂಕ ಹೃದಯದಿಂದೊಡಗೂಡಿದ ಒಬ್ಬ ವೀರನಹಾಗೆ ತೋರಿದನವನು.

ವಿಕಟನಗು ನಕ್ಕು 'ಅಶೋಕಮಾಲಾ! ಜಾತಿಯನ್ನು ಕುರಿತು ಹೇಳುತ್ತಿರುವಿ. ಈ ಸಮಾಜದ ಸಂಪ್ರದಾಯಗಳಿಗೆ ಏನು ಅಷ್ಟು ಶಕ್ತಿ? ಜಾತಿಯ ಕಟ್ಟುಪಾಡುಗಳು ಯಾರೋ ತಿಳಿವಿಲ್ಲದ ಮನುಷ್ಯರಿಂದ ಏರ್ಪಡಿಸಿದ ಒಂದು ಕೋಟೆ. ಅದನ್ನು ಒಡೆದು ತಳ್ಳುವುದು ವೀರಪುರುಷರ ಕರ್ತವ್ಯ. ನೈಜಪ್ರೇಮವು ಮಾನವನ ಸಂಪ್ರದಾಯಗಳಿಗೆ ಅಂಜದು. ಮನುಷ್ಯನ ಹೃದಯದಿಂದ ಉಕ್ಕಿ ಹರಿಯುವ ಈ ಆಕರ್ಷಣಶಕ್ತಿಯ ಮೂಲಕಾರಣವು ಪರಮ ರಹಸ್ಯವಾಗಿದೆ. ನನ್ನ ಹೃದಯದಲ್ಲಿ ಹೇಗೋ ಉದ್ಭವಿಸಿತು ಈ ಪ್ರೇಮ. ಅದನ್ನು ಬಾಡಲು ಬಿಡದೆ ಬೆಳೆಸುವುದಕ್ಕೆ ಬೇಕಾಗುವ ಶಕ್ತಿಯು ಎಲ್ಲಿಂದಲಾದರೂ ಖಂಡಿತ ಬರುವುದು. ಇದನ್ನು ನಾನು ನಿಶ್ಚಯನೆಂದು ನಂಬುತ್ತೇನೆ. ಉತ್ಸಾಹ, ಮನೋದಾರ್ಢ್ಯ ಮತ್ತು ತ್ಯಾಗಕ್ಕೆ ಈ ಪ್ರೇಮವೇ ಅಲ್ಲವೇ ತಾಯಿ! ಇದಿಲ್ಲದಿದ್ದರೆ ಪ್ರಪಂಚವೇ ಶೂನ್ಯವಾಗಿಬಿಡುವುದು. ಬೇರೆ ಯಾವ ವಸ್ತುವಿನಿಂದಲೂ ಇದನ್ನು ಉಂಟುಮಾಡುವುದಕ್ಕಾಗಲಿ ಅಳಿಸುವುದಕ್ಕಾಗಲಿ ಆಗದು. ಆದುದರಿಂದ ಜಾತಿಯ ರಾಕ್ಷಸನು ನಮ್ಮನ್ನು ಹೇಗೆ ತಾನೇ ಅಗಲಿಸಿ ಇರಿಸಬಲ್ಲನು? ಅಶೋಕಮಾಲಾ! ಬಾ, ನಿನ್ನ ಮನೆಗೆ ಹೋಗೋಣ' ಎಂದು ಅವಳೊಡನೆ ಗುಡಿಸಿಲಕಡೆಗೆ ಹೊರಟನು.

೨

ಶಾಲಿಯನ್ನು ಕಂಡೊಡನೆ ಆ ಚಂಡಾಲರ ಬೀದಿಯಲ್ಲಿದ್ದವರಿಗೆ ಮನಸ್ಸಿನಲ್ಲಿ ಸಂದೇಹ ಬಂತು. ಅವನು ಹೇಳಿದ ಸಂಗತಿಯೆಲ್ಲವನ್ನೂ ಕೇಳಿದರು. ಒಳ್ಳೆ ಚಿತ್ತಾಕರ್ಷಕ ರೂಪ; ದೊಡ್ಡ ವಂಶಕ್ಕೆ ತಕ್ಕ ಗಂಭೀರವಾದ ಮುಖಭಾವ; ಯೌವನ ಪ್ರಾಯ; ಅಂಥವನು ಚಂಡಾಲ ಕುಲದ ಹೆಣ್ಣನ್ನು ಮದುವೆಯಾಗಲು ಇಚ್ಛಿಸಿದನೆಂದರೆ ಅವರು ಸುಮ್ಮನೆ ನಂಬುತ್ತಾರೆಯೆ? ಪ್ರಶ್ನೆಗಳು, ಅಡ್ಡಪ್ರಶ್ನೆಗಳು, ಪರಿಹಾಸ್ಯದ ಮಾತು ಗಳು, ಎಲ್ಲಕ್ಕೂ ಉತ್ತರ ಕೊಡುತ್ತಾ ಸ್ಥಿರವಾದ ಬೆಟ್ಟದಂತೆ ನಿಂತನು ಶಾಲಿ. ಅವನ ಮಾತುಗಳನ್ನು ಕೇಳಿದನಂತರ 'ಇವನನ್ನೇಕೆ ಬುದ್ಧಿ ಯಿಲ್ಲದೆ ಹಿಂಸಿಸಿದೆವು? ಎಂದು ಅವರೇ ವ್ಯಸನಪಟ್ಟರು. ಪ್ರೇಮಕ್ಕೆ ಕಟ್ಟುಬಿದ್ದ ಇಬ್ಬರನ್ನೂ ಅವರು ವ್ಯಥೆಗೀಡುಮಾಡಬಯಸಲಿಲ್ಲ. ಆ ದಿನವೇ ಅಶೋಕಮಾಲಾಳ ತಂದೆ, ಸಹೋದರ, ಬಂಧುಬಳಗದವರು, ಎಲ್ಲರೂ ಒಂದೇ ಮನಸ್ಸಿನಿಂದ ಅವಳನ್ನು ಅವನಿಗೆ ವಿವಾಹಮಾಡಿ ಕೊಟ್ಟರು.

೩

ಹೀಗಿರುವಾಗ ಅನೂರಾಧಾಪುರದಲ್ಲಿ ಎಲ್ಲರ ಬಾಯಲ್ಲೂ ರಾಜ ಕುಮಾರನು ಕಾಣದೆಹೋದ ಮಾತೇಮಾತು. ಒಬ್ಬೊಬ್ಬರೂ ಬೇರೆಬೇರೆ ವಿಧವಾಗಿ ಮಾತಾಡಿಕೊಂಡರು. ನಾಲ್ಕು ದಿಕ್ಕುಗಳಿಗೂ ಕುದುರೆ ಸವಾರರೂ ಗೂಢಚಾರರೂ ಓಡಿದರು. ದುಷ್ಟಗೈಮುನುವಿನ ಮನಸ್ಸು ಶಾಂತಿಯಿಲ್ಲದೆ ತವಕಪಡುತ್ತಿತ್ತು. ರಾಜಕುಮಾರನನ್ನು ನೆನನೆನೆದು ಮನದಲ್ಲಿ ಮರುಗಿದನು.

ಶಾಲಿಯು ಕಾಣದೆ ಹೋದ ಹತ್ತನೆಯ ದಿನ ಹಲವು ಗೂಢ ಚಾರರು ಒಂದು ಕಾಡಿನಲ್ಲಿ ಹೊಕ್ಕು ರಾಜಕುಮಾರನನ್ನು ಹುಡು ಕಾಡುತ್ತಿದ್ದಾಗ, ಅಲ್ಲಿ ಹೊಸದಾಗಿ ಕಟ್ಟಿದ್ದ ಗುಡಿಸಿಲೊಂದು ಕಂಡಿತು. ಆ ಗುಡಿಸಿಲನ್ನು ಅವರು ಹೊಕ್ಕರು. ಶಾಲಿಯನ್ನು ಕಂಡೊಡನೆ ಅವರು

ಅವನ ಕಾಲಿಗೆ ಬಿದ್ದು 'ರಾಜಕುಮಾರರೆ, ತಮ್ಮನ್ನು ಎಲ್ಲೆಲ್ಲೊ ಹುಡುಕಿ ಅಲೆದು ಬಂದೆವು! ಮಹಾರಾಜರು ತಮ್ಮನ್ನು ಕಾಣದೆ ಮನಸ್ಸಿನಲ್ಲಿ ಮರುಗುತ್ತಿದ್ದಾರೆ. ಅರಮನೆಗೆ ದಯಮಾಡಿಸಬೇಕು' ಎಂದು ಪ್ರಾರ್ಥಿಸಿದರು.

ಅಶೋಕಮಾಲಾಗೆ ಪ್ರಪಂಚವೇ ಮುಗುಚಿಕೊಂಡಹಾಗೆ ಕಂಡಿತು. ಶಾಲಿ ಒಬ್ಬ ರಾಜಕುಮಾರ! ಅವಳ ತಲೆ ಗಿರ್ರನೆ ತಿರುಗಿ ಸುತ್ತಿತು. ಬಿರುಗಾಳಿಗೆ ತತ್ತಳಿಸುವ ಮಾವಿನ ಚಿಗುರಿನಹಾಗೆ ಅವಳ ದೇಹವು ನಡುಗಿತು. ಶಾಲಿಯ ಪಾದಗಳಲ್ಲಿ ಬಿದ್ದು 'ರಾಜಕುಮಾರರೆ! ಎಂಥ ಕೆಲಸವನ್ನು ಮಾಡಿದಿರಿ. ಅದೊ, ಮೇಘಗರ್ಜನೆ ಕೇಳಿಸುತ್ತೆ. 'ಫಳ್ ಫಳ್' ಎಂದು ಮಿಂಚು ಹೊಳೆಯುತ್ತಿದೆ. ಮಳೆ ಕರೆದು ಪ್ರವಾಹವು ಯಾವಾಗ ಬರುತ್ತದೆಂಬುದನ್ನು ಹೇಳಲಿಕ್ಕಾಗುವುದಿಲ್ಲ. ನಮ್ಮ ತಲೆಯಮೇಲೆ ನೇತಾಡುತ್ತಿರುವ ವಿಪತ್ತು ಯಾವಾಗಲಾದರೂ ಕಳಚಿ ಬೀಳತಕ್ಕುದೆ. ಆದುದರಿಂದ ಈಗಲೇ ತಾವು ಅರಮನೆಗೆ ಹೊರಡಿರಿ. ನನ್ನನ್ನು ಕುರಿತು ಚಿಂತಿಸಬೇಡಿ. ಕಾಡಿನಲ್ಲಿ ಅರಳಿದ ಮಲ್ಲಿಗೆ ಹೂ ಬಾಡಿದರೆ ಯಾರಿಗೇನು? ಅಲ್ಲದೆ ನಾನು ಪ್ರಾಣವನ್ನು ಇಟ್ಟುಕೊಂಡಿರುವುದರಿಂದ ತಮಗೆ ವಿಪತ್ತು ಸಂಭವಿಸಬಹುದು. ಆದ್ದರಿಂದ ನಾನು ನಿಮಗಾಗಿ ಪ್ರಾಣಕೊಡಲು ಸಹಿತ ಸಿದ್ಧಳಾಗಿದ್ದೇನೆ.' ಎಂದಳು.

ಆದರೆ ಶಾಲಿಯ ಮನಸ್ಸು ಕದಡಲಿಲ್ಲ. ಅವನಿಗೆ ಅವಳಮೇಲಿದ್ದ ಪ್ರೇಮವು ಸ್ವಲ್ಪ ಹೊತ್ತಿನ ಮೋಹದಿಂದುಂಟಾದ ಕಾಮದ ಪ್ರೇಮವಲ್ಲ. ದೇವರ ಆಣೆಯಿಂದ ಉದ್ಭವಿಸಿದ ದಿವ್ಯಪ್ರೇಮ. ಅವಳನ್ನು ಅಪ್ಪಿ ಅವನು 'ಅಶೋಕಮಾಲಾ, ಬಾಯಿಗೆ ಬಂದಂತೆ ಮಾತಾಡುತ್ತಿದ್ದೀಯಲ್ಲ; ನೀನಿಲ್ಲದಿದ್ದರೆ ನನಗೆ ಈ ಪ್ರಪಂಚವೆಲ್ಲ ಬರಿ ಕತ್ತಲು. ಬೆಳಕನ್ನು ಕಂಡಿರಲಿಲ್ಲ ನನ್ನ ಹೃದಯ. ನೀನು ಬಂದು ಬೆಳಕು ಹಚ್ಚಿ ಅದನ್ನು ಪ್ರಕಾಶಮಾನವಾಗಿ ಮಾಡಿದೆ. ನನ್ನ ಜೀವನ ದೇವತೆಯಾದ ನಿನ್ನ ಮುಂದೆ ರಾಜಭೋಗವೂ ಐಶ್ವರ್ಯವೂ ರಾಜ್ಯವೂ ಎಷ್ಟರದು? ನಿನ್ನ ಮುಖದ ಮೇಲಿನ ಮುಗುಳ್ನಗೆ, ಗುಣಸೌಂದರ್ಯಗಳು, ಮತ್ತು

ನಿನ್ನ ದೇವಗಾನವೇ ನನ್ನ ಐಶ್ವರ್ಯ. ನೀನು ಅನಾಥೆಯಾಗಿ, ಪರದೇಶಿಯಾಗಿ ಬಡವಳಂತೆ ಅಲೆಯುವುದು; ಆದರೆ ನಾನು........ಎಂದು ನೆನೆಯುವಾಗಲೆ ನನ್ನ ಎದೆ ಬಡಿದುಕೊಳ್ಳುವುದು. ಇದಾಗದು. ಎಂದಿಗೂ ಆಗದು!' ಎಂದನು.

ಈ ಸಮಾಚಾರವು ದುಷ್ಟಕೈಮುನುವಿಗೆ ಗೂಢಚಾರರಿಂದ ತಿಳಿಯಿತು. ಇದನ್ನು ಕೇಳಿದೊಡನೆ ಅವನ ಎದೆಯು 'ಫಳೀರ್' ಎಂದು ಹೊಡೆಯಿತು. ತನ್ನ ವಂಶಕ್ಕೆ ಕಳಂಕ ಹಚ್ಚಿದವನು ತನ್ನ ಹೊಟ್ಟೆಯಲ್ಲೇ ಹುಟ್ಟಿದ ಮಗನೆಂಬುದನ್ನು ಅವನಿಂದ ಊಹಿಸಲು ಸಹಿತ ಆಗಲಿಲ್ಲ. ಬಹಳ ಕೋಪಾವೇಶನಾಗಿ ಅವರಿಬ್ಬರನ್ನೂ ಕಡಿದುಹಾಕಿಬಿಡಬೇಕೆಂದು ಅವನು ಆ ಕಾಡಿಗೆ ಹೊರಟನು.

ದುಷ್ಟಕೈಮುನು ಗುಡಿಸಿಲನ್ನು ತಲುಪಿದಾಗ ಶಾಲಿಯು ಮೀಂಟಿದ ವೀಣೆಯ ತಂತಿಗಳಿಂದ ಹೊರಟ ರಾಗಧ್ವನಿಗೆ ಸಮನಾಗಿ ಅಶೋಕಮಾಲಾ ಈ ಪ್ರಪಂಚವನ್ನೂ ಸ್ವರ್ಗವನ್ನೂ ಒಂದು ಅದ್ಭುತವಾದ ಗೀತದಿಂದ ರಾಗಮಯವಾಗಿ ಮಾಡುತ್ತಿದ್ದಳು. ಆ ಗುಡಿಸಿಲ ಪಕ್ಕದಲ್ಲಿದ್ದ ಪಾರಿಜಾತ ಗಿಡದಲ್ಲಿ ಹೂಗಳು ತುಂಬಿ ತುಳುಕುತ್ತಿದ್ದವು. ಅಶೋಕಮಾಲಾಳ ನಿಷ್ಕಪಟವೂ ನಿಷ್ಕಳಂಕವೂ ಆದ ಎಳೆಮೊಗವನ್ನೂ ಮತ್ತು ಶಾಲಿಯ ಶಾಂತವಾದ ಮುಖಮುದ್ರೆಯನ್ನೂ ತೋರಿದ ನೋಟವು ದುಷ್ಟಕೈಮುನುವಿನ ಕೋಪವನ್ನೆಲ್ಲ ಕರಗಿಸಿ ನೀರಾಗಿಸಿತು.

ಅಶೋಕಮಾಲಾ ಅವನ ಪಾದಗಳಲ್ಲಿ ಬಿದ್ದು ನಮಸ್ಕರಿಸಿ 'ಮಹಾರಾಜರೇ! ಕ್ಷಮಿಸಬೇಕು. ನಾನೊಬ್ಬ ಬಡವಳು; ಅದರಲ್ಲೂ ಚಂಡಾಲ ಕುಲದ ಹುಡುಗಿ. ನಾನು ಮಾಡಿದ ತಪ್ಪು ಪರ್ವತದಂತಹುದು. ರಾಜಕುಮಾರನ ಹೃದಯವನ್ನು ಅಪಹರಿಸುವುದು ಸಾಮಾನ್ಯವಾದ ತಪ್ಪೆ? ಆದರೆ ಪ್ರಭೊ! ಅವರು ರಾಜಕುಮಾರರೆಂದು ತಿಳಿದಿದ್ದರೆ ನಾನು ಈ ವಿವಾಹಕ್ಕೆ ಎಂದಿಗೂ ಸಮ್ಮತಿಸುತ್ತಿರಲಿಲ್ಲ. ಇದನ್ನು ಕೈಗೆಟುಕದ ಕಲ್ಪವೃಕ್ಷವೆಂದು ಭಾವಿಸಿ ಪ್ರಾಣತ್ಯಾಗ ಮಾಡುತ್ತಿದ್ದೆ. ಈ ಕ್ಷಣವೇ ತಾವು ಅವರನ್ನು ಕರೆದುಕೊಂಡು ಹೋಗಿ.' ಎಂದು ಹೇಳಿದಳು.

'ಅದಾಗದು! ನನಗೆ ಅರಸುತನವೂ ಬೇಡ, ಸಿಂಹಾಸನವೂ ಬೇಡ!' ಎಂದನು ಶಾಲಿ. ಅವನ ಮನಸ್ಸಿನ ವೈರಾಗ್ಯವು ಮುಖದಲ್ಲಿ ಮಿಂಚಿ ಹೊಳೆಯಿತು.

ಒಂದು ದೊಡ್ಡ ಅಲೆ ಬಂದು ಹಡಗವನ್ನು ಮುಳುಗಿಸಿದ ಮೇಲೆ ಮತ್ತೆ ಸಮುದ್ರದಲ್ಲಿ ಲೀನವಾಗುವಂತೆ ದುಷ್ಟ ಕೈಮುನುವಿನ ಮನಸ್ಸೂ ಶಾಂತಿಯೊಡನೆ ಬೆರೆಯಿತು. ಯೌವನದ ಪ್ರಾಯದಲ್ಲ ಕಲಿಮೆನಿಕಾ ಎಂಬ ಶೂದ್ರಜಾತಿಯ ಹುಡುಗಿಯೊಡನೆ ತಾನು ನಡೆಸಿದ ಪ್ರಣಯ ಪ್ರಸಂಗವು ಅವನಿಗೆ ನೆನಪಾಯಿತು. ನಿಟ್ಟುಸಿರು ಬಿಟ್ಟು ಕುದುರೆಯನ್ನೇರಿದನು. ಹೊರಡುವಾಗ ತನ್ನ ಕುಮಾರನನ್ನು ನೋಡಿ 'ವತ್ಸ! ನಿನ್ನ ಪ್ರೇಮದ ಆಳವನ್ನೂ, ಅಶೋಕಮಾಲಾಗೋಸ್ಕರ ನೀನು ಮಾಡಿದ ತ್ಯಾಗದ ಬಲುಮೆಯನ್ನೂ ಕಂಡು ನನಗೆ ಹೆಮ್ಮೆಯಾಗಿದೆ' ಎಂದು ಹೇಳುತ್ತಿರುವಾಗ ಅವನ ಗಂಟಲು ಬಿಗಿಯಿತು; ಕಣ್ಣುಗಳಿಂದ ಎರಡು ತೊಟ್ಟು ಕಣ್ಣೀರು ಉದರಿತು.



